# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಮಾರ್ಚ್ ೨೬, ೨೦೧೫ (ಚೈತ್ರ ೫, ಶಕ ವರ್ಷ ೧೯೩೭)<br>Bengaluru, Thursday, March 26, 2015 (Chaithra 5, Shaka Varsha 1937) | ಸಂಚಿಕೆ ೧೩<br>Issue 13 |
|---|---|---|

## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಾರ್ಯಾಲಯ, ಮೈಸೂರು

**ಅಧಿಸೂಚನೆ**

**ಸಂಖ್ಯೆಃ ಆಡಳಿತ/ನೇಮಕಾತಿ(ಶೀ)/19036/2014 ಮೈಸೂರು, ದಿನಾಂಕ 24.12.2014.**

ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು ಘಟಕದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಈ ಅಧಿಸೂಚನೆಯಲ್ಲಿ ನಿಗದಿಪಡಿಸಿ ಲಗತ್ತಿಸಿರುವ ಅರ್ಜಿ ನಮೂನೆಯಲ್ಲಿ ದಿನಾಂಕ 26.12.2014ರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಅರ್ಜಿಗಳನ್ನು ಸಲ್ಲಿಸಲು ಕಡೆಯ ದಿನಾಂಕಃ 19.01.2015ರ ಅಪರಾಹ್ನ 05.00 ಗಂಟೆ.

**ವಿಶೇಷ ಸೂಚನೆ :**

1. ಅರ್ಜಿಗಳು ಕಡ್ಡಾಯವಾಗಿ ನಿಗದಿತ ನಮೂನೆಯಲ್ಲಿಯೇ ಇರಬೇಕು.
2. ಅಭ್ಯರ್ಥಿಗಳು ಅರ್ಜಿಯಲ್ಲಿ ತಮ್ಮ ಚಾಲ್ತಿಯಲ್ಲಿರುವ ದೂರವಾಣಿ ಸಂಖ್ಯೆ ಹಾಗೂ ಈ–ಮೇಲ್ ವಿಳಾಸವನ್ನು ಕಡ್ಡಾಯವಾಗಿ ನಮೂದಿಸಬೇಕು.
3. ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಮಾರಾಟ ಮಾಡಲಾಗುವುದಿಲ್ಲ. ಆದರೆ, ನಮೂನೆಯನ್ನು ಈ ಕಛೇರಿಯ ವೆಬ್‌ಸೈಟ್: http://ecourts.gov.in/mysore ಇಂದ ಪ್ರತಿ ಮಾಡಿಕೊಂಡು ಬಳಸಬಹುದು.

1. **ಶೀಘ್ರಲಿಪಿಗಾರರುಃ**

**ಖಾಲಿ ಹುದ್ದೆಗಳು :** – 15

**ವೇತನ ಶ್ರೇಣಿ** : 14550-350-15600-400-17200-450-19000-500–21000- 600-24600-700-26700

ಹುದ್ದೆಗಳ ವರ್ಗೀಕರಣಃ

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಯೋ.ನಿ.ಅ | ಅಂ.ವಿ. | ಒಟ್ಟು |
|---|---|---|---|---|---|---|---|
| ಪ.ಪಂಗಡ | – | 01 | 01 | – | – | – | 02 |
| ಪ್ರವರ್ಗ - I | – | – | – | – | – | 01 * | 01 |
| II – ಎ | 01 | 01 | – | 01 | – | – | 03 |
| III – ಎ | – | – | 01 | – | – | | 01 |
| ಸಾಮಾನ್ಯ | 02 | 02 | 02 | 01 | 01 | – | 08 |
| **ಒಟ್ಟು** | **03** | **04** | **04** | **02** | **01** | **01** | **15** |

* ದೃಷ್ಟಿಮಾಂದ್ಯ / ದೃಷ್ಟಿದೋಷವುಳ್ಳ ಅಭ್ಯರ್ಥಿ (Blind & Low Vision)

**ವಿದ್ಯಾರ್ಹತೆ:** ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಯಲ್ಲೂ ಹಿರಿಯ ಶ್ರೇಣಿ ಬೆರಳಚ್ಚು ಮತ್ತು ಶೀಘ್ರಲಿಪಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನ :** ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು ನಿಮಿಷ ಒಂದಕ್ಕೆ 120 ಪದಗಳ ದರದಲ್ಲಿ 05 ನಿಮಿಷಗಳ ಉಕ್ತಲೇಖನವನ್ನು ತೆಗೆದುಕೊಂಡು, ಉಕ್ತಲೇಖನವನ್ನು 45 ನಿಮಿಷಗಳಲ್ಲಿ ಅನುಲಿಪಿ ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ :** ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 05 ಅಂಕಗಳನ್ನೊಳಗೊಂಡಿರುತ್ತದೆ.

**ವಿಶೇಷ ಟಿಪ್ಪಣಿ :** ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಲ್ಲಿ, ಮಹಿಳಾ ಅಭ್ಯರ್ಥಿಗಳು, ಮಾಜಿ ಸೈನಿಕ ಅಭ್ಯರ್ಥಿಗಳು, ಯೋಜನಾ ನಿರಾಶ್ರಿತ ಅಭ್ಯರ್ಥಿಗಳು ಹಾಗೂ ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ, ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಹುದ್ದೆಗಳನ್ನು ಹೊರತುಪಡಿಸಿ, ಇನ್ನುಳಿದ ಹಿಂದುಳಿದ ವರ್ಗಗಳ ಹುದ್ದೆಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ದೃಷ್ಟಿಮಾಂದ್ಯ / ದೃಷ್ಟಿದೋಷವುಳ್ಳ (Blind & Low Vision) ಅಭ್ಯರ್ಥಿಯು ಲಭ್ಯವಿಲ್ಲದೇ ಇದ್ದಲ್ಲಿ, ಆ ಹುದ್ದೆಯನ್ನು ಆಯಾ ಪಂಗಡದ, ಗುರುತಿಸಲಾದ ಇತರೇ ಅಂಗವಿಕಲ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಅಂಗವಿಕಲ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಹುದ್ದೆಗಳನ್ನು ಹೊರತುಪಡಿಸಿ, ಇನ್ನುಳಿದ ಹಿಂದುಳಿದ ವರ್ಗಗಳ ಹುದ್ದೆಗಳನ್ನು ಸಾಮಾನ್ಯ ವರ್ಗದ ಅಂಗವಿಕಲ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹತಾ ಪರೀಕ್ಷೆಗೆ ಹಾಗೂ ಸಂದರ್ಶನಕ್ಕೆ ಆಯ್ಕೆಯಾಗುವ ಅಭ್ಯರ್ಥಿಗಳು ಮೈಸೂರು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

**ವಯೋಮಿತಿಃ**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ. ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ. ಗರಿಷ್ಠ ವಯೋಮಿತಿ

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 3ಎ | 38 ವರ್ಷ |
| ಪ.ಜಾತಿ, ಪ.ಪಂಗಡ, ಪ್ರವರ್ಗ– 1 | 40 ವರ್ಷ |

ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ ವಯಸ್ಸನ್ನು ಮೀರಿರಕೂಡದು.

**ವಯೋಮಿತಿ ಸಡಿಲಿಕೆ :**

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಆಯಾ ಅಭ್ಯರ್ಥಿಗಳಿಗೆ ನಮೂದಿಸಿರುವ ಮಟ್ಟಿಗೆ ಹೆಚ್ಚಿಸಲಾಗುವುದು.

1. ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವರು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ, ಎರಡರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.
2. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ 03 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
3. ಅಭ್ಯರ್ಥಿಯು ಅಂಗವಿಕಲನಾಗಿದ್ದಲ್ಲಿ, ವಿಧವೆಯಾಗಿದ್ದಲ್ಲಿ ಮತ್ತು ಜೀತ ಕಾರ್ಮಿಕನಾಗಿದ್ದಲ್ಲಿ 10 ವರ್ಷಗಳು.
4. ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೊ ಅಥವಾ ಹಿಂದೆ ಸೇವೆ ಸಲ್ಲಿಸಿದ್ದಾರೊ ಅಷ್ಟು ವರ್ಷಗಳ ಅಥವಾ 05 ವರ್ಷಗಳ ಅವಧಿ, ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
5. ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣ ಕಾಲಿಕ ಪರೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕೆಡೆಟ್ ಪರೀಕ್ಷಕನಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.
6. ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.

**ಪರಿವೀಕ್ಷಣಾ ಅವಧಿ :**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 02 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಮತ್ತು ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ :**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣಪತ್ರವನ್ನು ಪಡೆದು, ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

**ಅರ್ಜಿ ಸಲ್ಲಿಸುವ ವಿಧಾನ :**

ಈ ಪ್ರಕಟಣೆಯಲ್ಲಿ ಲಗತ್ತಿಸಿರುವ ಅರ್ಜಿ ನಮೂನೆಯನ್ನು ಬೆರಳಚ್ಚು ಮಾಡಿ / ಕಂಪ್ಯೂಟರ್ ಮೂಲಕ ತಯಾರಿಸಿ, **ಅರ್ಜಿಯನ್ನು ತಮ್ಮ ಸ್ವಂತ ಕೈಬರಹದಲ್ಲಿ ತಮಗೆ ಅನ್ವಯಿಸುವ ಎಲ್ಲಾ ಅಂಕಣಗಳನ್ನು ಭರ್ತಿ ಮಾಡುವುದು.** ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ **ಭಾವಚಿತ್ರವನ್ನು** ಅರ್ಜಿಯ ಮೇಲೆ ಅಂಟಿಸಿ, ಅದರ **ಮೇಲೂ** ಸಹ **ಸಹಿ ಮಾಡುವುದು** ಹಾಗೂ ಅರ್ಜಿ ನಮೂನೆಯ ಕೊನೆಯಲ್ಲಿ **ಘೋಷಣೆಯ ನಂತರ ಸಹಿ ಮಾಡುವುದು.** ಹುದ್ದೆಗೆ ಸಂಬಂಧಿಸಿದ ವಿದ್ಯಾರ್ಹತೆ, ವಯಸ್ಸು ಮತ್ತು ಕೋರಿರುವ ಮೀಸಲಾತಿಗೆ ಸಂಬಂಧಿಸಿದಂತೆ **ಪ್ರಮಾಣ ಪತ್ರಗಳನ್ನು** ಅಧಿಕೃತ ಅಧಿಕಾರಿಗಳಿಂದ ಪಡೆದು, ಅವುಗಳ **ನಕಲುಗಳನ್ನು ಸ್ವಯಂ ದೃಢೀಕರಿಸಿ (ಸಹಿ ಮಾಡಿ)** ಅರ್ಜಿಯೊಂದಿಗೆ ಲಗತ್ತಿಸಿ ಅರ್ಜಿಯನ್ನು **"ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು– 570 005", ಇವರಿಗೆ ದಿನಾಂಕಃ 19.01.2015ರ ಅಪರಾಹ್ನ 05.00 ಗಂಟೆಯೊಳಗೆ** ತಲುಪುವಂತೆ ಕಳುಹಿಸುವುದು. ಅರ್ಜಿಯನ್ನು ಕಳುಹಿಸುವ ಲಕೋಟೆ ಮೇಲೆ ಅಭ್ಯರ್ಥಿಯು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಾರೆ ಎಂಬುದರ ಬಗ್ಗೆ ಹುದ್ದೆಯ ಹೆಸರನ್ನು ನಮೂದಿಸುವುದು.

**ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲಾತಿಗಳು:**

ಅಭ್ಯರ್ಥಿಗಳು ಈ ಕೆಳಕಂಡ ದಾಖಲಾತಿಗಳ **ಸ್ವಯಂ ದೃಢೀಕರಿಸಿದ (ಸಹಿ ಮಾಡಿದ)** ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಸ್ವಯಂ ದೃಢೀಕರಿಸಿರದ ಲಗತ್ತುಗಳನ್ನು ಪರಿಗಣಿಸಲಾಗುವುದಿಲ್ಲ. ಸ್ವಯಂ ದೃಢೀಕರಿಸಿರದ ಲಗತ್ತುಗಳನ್ನು ಹೊರತುಪಡಿಸಿದರೂ ಸಹ ಅಭ್ಯರ್ಥಿಯ ಅರ್ಜಿಯು ಸಿಂಧುವಾಗುವಂತಿದ್ದಲ್ಲಿ ಮಾತ್ರ ಅಂತಹ ಅರ್ಜಿಗಳನ್ನು ಪುರಸ್ಕರಿಸಲಾಗುವುದು, ಇಲ್ಲದಿದ್ದಲ್ಲಿ ತಿರಸ್ಕರಿಸಲಾಗುವುದು.

1. ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ನಿಗದಿತ ಸ್ಥಳದಲ್ಲಿ ಅಂಟಿಸಿರಬೇಕು.
2. ಜನ್ಮ ದಿನಾಂಕದ ದೃಢೀಕರಣಕ್ಕಾಗಿ ಎಸ್.ಎಸ್.ಎಲ್.ಸಿ.ಅಂಕಪಟ್ಟಿ / ಕ್ಯುಮುಲೇಟಿವ್ ರೆಕಾರ್ಡ್ / ಇನ್ನಾವುದೇ ಅಧಿಕೃತ ದಾಖಲಾತಿಗಳು.
3. ವಿದ್ಯಾರ್ಹತೆಯ ಬಗ್ಗೆ ಅಂಕಪಟ್ಟಿಗಳು.
4. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ 'ಡಿ' ಯಲ್ಲಿ, ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ 'ಇ' ಯಲ್ಲಿ ಮತ್ತು 2ಎ ಮತ್ತು 3ಎ ಗೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್'ನಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸಬೇಕು.
5. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ/96/ಸೇನನಿ/2005 ದಿನಾಂಕಃ 10.08.2005ರ ಪ್ರಕಾರ ನಿಗದಿತ ನಮೂನೆ–2ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.
6. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ–2ರ ಜೊತೆ ನಮೂನೆ–1ರಲ್ಲೂ ದೃಢೀಕರಣ ಪತ್ರವನ್ನು ಸಲ್ಲಿಸುವುದು.
7. ಕನ್ನಡ ಮಾಧ್ಯಮ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸುವುದು.
8. ಅಂಗವಿಕಲ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ 19.11.2005ರ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆಃಸಿಆಸುಇ/115/ಸೇನನಿ/2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸಬೇಕು.
9. ಯೋಜನಾ ನಿರಾಶ್ರಿತ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ/44/ಸೇನನಿ/2001ರ ದಿನಾಂಕ 27.07.2001ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು.
10. ಮಾಜಿ ಸೈನಿಕ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸೈನಿಕ ಸೇವೆಯಿಂದ ಬಿಡುಗಡೆಯಾದ / ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರವನ್ನು ಸಲ್ಲಿಸುವುದು.
11. ವಿಧವೆಯರು, ಜೀತ ಕಾರ್ಮಿಕರು ಹಾಗೂ ವಯೋಮಿತಿ ರಿಯಾಯಿತಿಗೆ ಅರ್ಹರಾದ ಇನ್ನಿತರರು ವಯೋಮಿತಿ ರಿಯಾಯಿತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸುವುದು.

12. ಸ್ವಯಂ ವಿಳಾಸವಿರುವ ರೂ.5/– ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಅರ್ಜಿಯೊಂದಿಗೆ ಲಗತ್ತಿಸುವುದು

**ವಿಶೇಷ ಸೂಚನೆಃ**

**ಅರ್ಜಿಯೊಂದಿಗೆ ಲಗತ್ತಿಸುವ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಲಗತ್ತಿಸಿರಬೇಕು ಹಾಗೂ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಕಡ್ಡಾಯವಾಗಿ ಸ್ವಯಂ ದೃಢೀಕರಿಸಿರಬೇಕು.**

ಯಾವುದೇ ಅಭ್ಯರ್ಥಿಯು ಸರ್ಕಾರಿ/ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿತ್ವದ ಬಗ್ಗೆ ಪ್ರಭಾವ ಬೀರಿದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

ಯಾವುದೇ ಅಭ್ಯರ್ಥಿಯು ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯುವುದು ಮತ್ತು ಈ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕವು ಸಾರ್ವಜನಿಕ ರಜೆಯಾಗಿದ್ದರೆ ಮುಂದಿನ ಕಛೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ತಿಳಿಯುವುದು.

**ಕೆ.ಎಸ್. ಮುದಗಲ್**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಮೈಸೂರು.

**ಅರ್ಜಿ ನಮೂನೆ**

**ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರದ ಮೇಲೆ ಸಹಿ ಮಾಡಿ ಅಂಟಿಸುವುದು.**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಮೈಸೂರು – ಇವರಿಗೆ.

ದಿನಾಂಕ: 24–12–2014ರ ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ : ಆಡಳಿತ/ನೇಮಕಾತಿ (ಶ್ರೀ)/19036/2014 ಮೇರೆಗೆ ನಾನು ಶೀಘ್ರಲಿಪಿಗಾರರ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ ಮತ್ತು ಈ ಕೆಳಕಂಡ ಮಾಹಿತಿಯನ್ನು ಒದಗಿಸುತ್ತಿದ್ದೇನೆ.

| | | | | |
|---|---|---|---|---|
| 1 | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2 | ತಂದೆಯ / ಗಂಡನ ಹೆಸರು | | | |
| 3 | ತಾಯಿಯ ಹೆಸರು | | | |
| 4 | ಜನ್ಮ ದಿನಾಂಕ | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | ದಿನಗಳು |
| 6 | ಲಿಂಗ | ಪುರುಷ | ಮಹಿಳೆ/ಇತರೆ | |
| 7 | ರಾಷ್ಟ್ರೀಯತೆ : | | | |
| 8 | ಧರ್ಮ ಮತ್ತು ಜಾತಿ | | | |
| 9 | ವೈವಾಹಿಕ ಸ್ಥಿತಿ | ವಿವಾಹಿತ | ಅವಿವಾಹಿತ | |
| 10 | ವಿವಾಹಿತರಾದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡತಿ ಇದ್ದಾರೆಯೇ? | | | |
| 11 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರ? | ಹೌದು | ಇಲ್ಲ | |
| 12 | ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರು ಸೇವೆಯಿಂದ ವಜಾ ಆಗಿದ್ದೀರ ಅಥವಾ ತೆಗೆದುಹಾಕಲ್ಪಟ್ಟಿದ್ದೀರ? | ಹೌದು | ಇಲ್ಲ | |

<table>
<tr><td rowspan="4">13</td><td rowspan="4">ಕೋರುವ ಮೀಸಲಾತಿಗಳು<br>(ಕೋರುವ ಮೀಸಲಾತಿಯನ್ನು √ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು)</td><td>ಸಾಮಾನ್ಯ</td><td>ಪ.ಜಾತಿ</td><td>ಪ.ಪಂಗಡ</td><td>ಪ್ರವರ್ಗ–1</td></tr>
<tr><td></td><td></td><td colspan="2"></td></tr>
<tr><td>2ಎ</td><td>2ಬಿ</td><td>3ಎ</td><td>3ಬಿ</td></tr>
<tr><td></td><td></td><td></td><td></td></tr>
<tr><td rowspan="2">14</td><td rowspan="2">ನೀವು ಈ ಯಾವುದಾದರು ಮೀಸಲಾತಿ ಅಡಿಯಲ್ಲಿ ಬರುತ್ತೀರ ?<br>(ಸೇರುವ ಮೀಸಲಾತಿಯನ್ನು √ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು)</td><td>ಗ್ರಾಮೀಣ</td><td>ಮಾ.ಸೈ</td><td>ಯೋ.ನಿ.ಅ.</td><td>ಅಂ.ಅ.</td></tr>
<tr><td></td><td></td><td></td><td></td></tr>
<tr><td rowspan="6">15</td><td>ವಿದ್ಯಾರ್ಹತೆ :<br>(ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕದ್ದು)</td><td>ತೇರ್ಗಡೆಯಾದ ತಿಂಗಳು ಮತ್ತು ವರ್ಷ</td><td colspan="2">ಗರಿಷ್ಠ ಅಂಕಗಳು</td><td>ಗಳಿಸಿದ ಅಂಕಗಳು</td></tr>
<tr><td>ಎಸ್.ಎಸ್.ಎಲ್.ಸಿ.</td><td></td><td colspan="2"></td><td></td></tr>
<tr><td>ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ)</td><td></td><td colspan="2"></td><td></td></tr>
<tr><td>ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ)</td><td></td><td colspan="2"></td><td></td></tr>
<tr><td>ಕನ್ನಡ ಶೀಘ್ರಲಿಪಿ (ಹಿರಿಯ ಶ್ರೇಣಿ)</td><td></td><td colspan="2"></td><td></td></tr>
<tr><td>ಆಂಗ್ಲ ಶೀಘ್ರಲಿಪಿ (ಹಿರಿಯ ಶ್ರೇಣಿ)</td><td></td><td colspan="2"></td><td></td></tr>
<tr><td>16</td><td>ತಾಂತ್ರಿಕ ವಿದ್ಯಾರ್ಹತೆ</td><td colspan="4"></td></tr>
<tr><td rowspan="2">17</td><td rowspan="2">ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ ?</td><td colspan="2">ಹೌದು</td><td colspan="2">ಇಲ್ಲ</td></tr>
<tr><td colspan="2"></td><td colspan="2"></td></tr>
<tr><td rowspan="2">18</td><td rowspan="2">ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿದ್ದಲ್ಲಿ, ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣ ಪತ್ರ ನಕಲನ್ನು ಲಗತ್ತಿಸಿದ್ದೀರಾ ?</td><td colspan="2">ಹೌದು</td><td colspan="2">ಇಲ್ಲ</td></tr>
<tr><td colspan="2"></td><td colspan="2"></td></tr>
<tr><td>19</td><td>ಅಭ್ಯರ್ಥಿಯ ಖಾಯಂ ವಿಳಾಸ, ದೂರವಾಣಿ ಸಂಖ್ಯೆ ಹಾಗೂ ಈ–ಮೇಲ್ ಐಡಿ.</td><td colspan="4"></td></tr>
<tr><td>20</td><td>ಅಭ್ಯರ್ಥಿಯ ಅಂಚೆ ವಿಳಾಸ ಮತ್ತು ದೂರವಾಣಿ ಸಂಖ್ಯೆ ಹಾಗೂ ಈ–ಮೇಲ್ ಐ.ಡಿ.</td><td colspan="4"></td></tr>
<tr><td>21</td><td>ನಿಮ್ಮ ಸ್ವವಿಳಾಸವಿರುವ ರೂ.5/–ರ ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಲಗತ್ತಿಸಿದ್ದೀರಾ ?</td><td colspan="4"></td></tr>
</table>

ಈ ಮೇಲ್ಕಂಡ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತೇನೆ ಹಾಗೂ ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತ್ವವನ್ನು ರದ್ದುಪಡಿಸಬಹುದೆಂದು ಘೋಷಿಸುತ್ತೇನೆ.

ಸ್ಥಳ :

ದಿನಾಂಕ: **ಅಭ್ಯರ್ಥಿಯ ಸಹಿ**

## ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಾರ್ಯಾಲಯ

### ಸೂಚನೆ

**ಸಂಖ್ಯೆ: ಆಡಳಿತ/ಅ/ 2933/ 2015 ಮೈಸೂರು, ದಿನಾಂಕ: 19.02.2015.**

ಉಲ್ಲೇಖ : 1) ಈ ಕಛೇರಿಯ ನೇಮಕಾತಿ ಅಧಿಸೂಚನೆ ಸಂಖ್ಯೆ: ಆಡಳಿತ/ನೇಮಕಾತಿ(ಶೀ)/19036/2014 ದಿ.24.12.2014.

2) ಈ ಕಛೇರಿಯ ಟಿಪ್ಪಣಿ ಮತ್ತು ಆದೇಶ ದಿ.19.02.2015.

ಈ ಕೆಳಕಂಡ ಸೂಚನೆಯನ್ನು ಮೇಲ್ಕಂಡ ಉಲ್ಲೇಖ–1ರಲ್ಲಿ ಓದಲಾಗಿರುವ ನೇಮಕಾತಿ ಅಧಿಸೂಚನೆಯ ಸಂಬಂಧ ಹೊರಡಿಸಲಾಗಿದೆ.

"ಈ ಕಛೇರಿಯ ನೇಮಕಾತಿ ಅಧಿಸೂಚನೆ ಸಂಖ್ಯೆ: ನೇಮಕಾತಿ(ಶೀ)/19036/2014 ದಿನಾಂಕ 24.12.2014ರನ್ವಯ ನಿಗದಿಪಡಿಸಲಾಗಿದ್ದ ಕಡೆಯ ದಿನಾಂಕವು 19.01.2015 ರಿಂದ 31.03.2015ಕ್ಕೆ ಮುಂದೂಡಲಾಗಿದೆ".

**ಕೆ.ಎಸ್. ಮುದಗಲ್**
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಮೈಸೂರು.

PR-48
SC-10

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-560 001.**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ಇಪ(2) 104/2014-15/ಪಿಎಸ್‌ಸಿ, ಬೆಂಗಳೂರು, ದಿನಾಂಕ : 26-06-2014.**

2013ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)929/ 2013-14/ಪಿಎಸ್‌ಸಿ, ದಿನಾಂಕ: 02-12-2013 ರಡಿ ದಿನಾಂಕ: 23-01-2014ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ ಈ ಕೆಳಕಂಡ ಅಭ್ಯರ್ಥಿಯು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನದಲ್ಲಿ ಗಳಿಸಿರುವ ವಿನಾಯಿತಿಯನ್ನು ನಿಯಮಾನುಸಾರ ಪರಿಗಣಿಸಿ ತತ್ಸಂಬಂಧ ಅರ್ಹ ಅಭ್ಯರ್ಥಿಯ ಫಲಿತಾಂಶವನ್ನು ತಿದ್ದುಪಡಿಯ ಮೂಲಕ ಸಂಬಂಧಿತರ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ.

**ಕಾರವಾರ ಕೇಂದ್ರ**

**ಅಪೆಂಡಿಕ್ಸ್- 'ಎ'**

**ಅಕೌಂಟ್ಸ್ ಹೈಯರ್**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ. 51717 ಅನ್ನು ಸೇರಿಸಿ ಓದಿಕೊಳ್ಳುವುದು

**ಆರ್. ವೆಂಕಟೇಶ್ ಕುಮಾರ್, ಭಾ.ಆ.ಸೇ.,**
ಪರೀಕ್ಷಾ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ,
ಉದ್ಯೋಗ ಸೌಧ, ಬೆಂಗಳೂರು-56 001.

**P.R. 31**
**S.C. 25**

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-560 001.**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ಇಪ(2)391/2014-15/ಪಿಎಸ್‌ಸಿ, ಬೆಂಗಳೂರು, ದಿನಾಂಕ : 28-01-2015.**

2014ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)1166/ 2014-15/ಪಿಎಸ್‌ಸಿ, ದಿನಾಂಕ: 30-09-2014 ರಂದು ಪ್ರಕಟಿಸಲಾಗಿದ್ದು, ಅದರಂತೆ ಸದರಿ ಅಧಿವೇಶನದಲ್ಲಿ ಅಭ್ಯರ್ಥಿಯು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನದಲ್ಲಿ ಗಳಿಸಿರುವ ವಿನಾಯಿತಿಯನ್ನು ಪರಿಗಣಿಸಿ ಸಂಬಂಧಿತರ ಮಾಹಿತಿಗಾಗಿ ಈ ತಿದ್ದುಪಡಿಯ ಮೂಲಕ ಫಲಿತಾಂಶವನ್ನು ಪ್ರಕಟಿಸಲಾಗಿದೆ.

**ಅಪೆಂಡಿಕ್ಸ್- 'ಎ'**

**ಮೈಸೂರು ಕೇಂದ್ರ**

**ಅಕೌಂಟ್ಸ್ ಹೈಯರ್**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ. 128115 ಅನ್ನು ಸೇರಿಸಿ ಓದಿಕೊಳ್ಳುವುದು

**ಆರ್. ವೆಂಕಟೇಶ್ ಕುಮಾರ್, ಭಾ.ಆ.ಸೇ.,**
ಪರೀಕ್ಷಾ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ,
ಉದ್ಯೋಗ ಸೌಧ, ಬೆಂಗಳೂರು-56 001.

**P.R. 32**
**S.C. 25**

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-560 001.**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ಇಪ(2)383/2014-15/ಪಿಎಸ್‌ಸಿ, ಬೆಂಗಳೂರು, ದಿನಾಂಕ : 28-01-2015.**

2014ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)1166/ 2014-15/ಪಿಎಸ್‌ಸಿ, ದಿನಾಂಕ: 30-09-2014 ರಂದು ಪ್ರಕಟಿಸಲಾಗಿದ್ದು, ಅದರಂತೆ ಸದರಿ ಅಧಿವೇಶನದಲ್ಲಿ ಅಭ್ಯರ್ಥಿಯು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನದಲ್ಲಿ ಗಳಿಸಿರುವ ವಿನಾಯಿತಿಯನ್ನು ಪರಿಗಣಿಸಿ ಸಂಬಂಧಿತರ ಮಾಹಿತಿಗಾಗಿ ಈ ತಿದ್ದುಪಡಿಯ ಮೂಲಕ ಫಲಿತಾಂಶವನ್ನು ಪ್ರಕಟಿಸಲಾಗಿದೆ.

**ಅಪೆಂಡಿಕ್ಸ್- 'ಎ'**

**ಮೈಸೂರು ಕೇಂದ್ರ**

**ಅಕೌಂಟ್ಸ್ ಹೈಯರ್**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ. 127467 ಅನ್ನು ಸೇರಿಸಿ ಓದಿಕೊಳ್ಳುವುದು

**ಆರ್. ವೆಂಕಟೇಶ್ ಕುಮಾರ್, ಭಾ.ಆ.ಸೇ.,**
ಪರೀಕ್ಷಾ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ,
ಉದ್ಯೋಗ ಸೌಧ, ಬೆಂಗಳೂರು-560 001

**P.R. 33**
**S.C. 25**

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560 001.**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ಇಪ(2)109/2014–15/ಪಿಎಸ್‌ಸಿ, ಬೆಂಗಳೂರು, ದಿನಾಂಕ : 02–07–2014.**

2013ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)394/2014–15/ಪಿಎಸ್‌ಸಿ, ದಿನಾಂಕ: 30–04–2014 ರಂದು ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ ಅಭ್ಯರ್ಥಿಯು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನದಲ್ಲಿ ಗಳಿಸಿರುವ ವಿನಾಯಿತಿಯನ್ನು ಪರಿಗಣಿಸಿ ತತ್ಸಂಬಂಧ ಅರ್ಹ ಮಾಹಿತಿಗಾಗಿ ಈ ತಿದ್ದುಪಡಿಯ ಮೂಲಕ ಫಲಿತಾಂಶವನ್ನು ಪ್ರಕಟಿಸಲಾಗಿದೆ.

**ಬಾಗಲಕೋಟೆ ಕೇಂದ್ರ**

**ಅಪೆಂಡಿಕ್ಸ್– 'ಎ'**

**ಅಕೌಂಟ್ಸ್ ಹೈಯರ್**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ. 63142 ಅನ್ನು ಸೇರಿಸಿ ಓದಿಕೊಳ್ಳುವುದು

**ಗದಗ ಕೇಂದ್ರ**

**ಅಪೆಂಡಿಕ್ಸ್– 'ಎ'**

**ಅಕೌಂಟ್ಸ್ ಹೈಯರ್**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ. 74615 ಅನ್ನು ಸೇರಿಸಿ ಓದಿಕೊಳ್ಳುವುದು

**ಬೆಂಗಳೂರು ಕೇಂದ್ರ**

**ಅಪೆಂಡಿಕ್ಸ್– 'ಎ'**

**ಎಸ್.ಎ.ಎಸ್. ಭಾಗ–1**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ. 52580 ಅನ್ನು ಸೇರಿಸಿ ಓದಿಕೊಳ್ಳುವುದು

**ಬೆಂಗಳೂರು ಕೇಂದ್ರ**

**ಅಪೆಂಡಿಕ್ಸ್– 'ಎ'**

**ಎಸ್.ಎ.ಎಸ್. ಭಾಗ–3**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ. 50350 ಅನ್ನು ಸೇರಿಸಿ ಓದಿಕೊಳ್ಳುವುದು

**ಬೆಂಗಳೂರು ಕೇಂದ್ರ**

**ಅಪೆಂಡಿಕ್ಸ್– 'ಎ'**

**ರೆವಿನ್ಯೂ ಹೈಯರ್ ಭಾಗ–1**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ. 52208 ಅನ್ನು ಸೇರಿಸಿ ಓದಿಕೊಳ್ಳುವುದು

**ಬೆಂಗಳೂರು ಕೇಂದ್ರ**

**ಅಪೆಂಡಿಕ್ಸ್– 'ಬಿ'**

**ಟ್ರೆಜ಼ರಿ ಅಕೌಂಟ್ಸ್ ಭಾಗ–2**

ಪತ್ರಿಕೆ 2 ಮತ್ತು 3ರಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ. 54405 ಅನ್ನು ಸೇರಿಸಿ ಓದಿಕೊಳ್ಳುವುದು

**ಆರ್. ವೆಂಕಟೇಶ್ ಕುಮಾರ್, ಭಾ.ಆ.ಸೇ.,**
ಪರೀಕ್ಷಾ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ,
ಉದ್ಯೋಗ ಸೌಧ, ಬೆಂಗಳೂರು–56 001.

**P.R. 34**

**S.C. 25**

## FORM- IV

**(See Rule 12)**

**NOTICE**

It is hereby notified that the undersigned has changed his name from **Sri. SHIVANAGOUDA S/o NARASANAGOUDA DONI to SHIVANAGOUDA S/o NARASANAGOUDA PATIL**

**PD- C/N-134** **SHIVANAGOUDA S/o NARASANAGOUDA DONI**

**SC-10**

**FORM-I**

**(See Rule 9)**

**DEPARTMENT OF POLICE**

**OFFICE OF THE PRINCIPAL, K.S.R.P.TRAINING SCHOOL, MUNIRABAD**

**NOTIFICATION**

**Dated : 10-02-2015.**

**Sri UMESH S/o HANUMANTHAPPA MADIWALAR** Working as RESERVE HEAD CONSTABLE in the POLICE Department of Office of the K.S.R.P.TRAINING SCHOOL, MUNIRABAD is permitted to change his name to **UMESH S/o HANUMANTHAPPA MUNDAGOD.**

**PD-C/N-136**

**SC-10**

**PRINCIPAL**

K.S.R.P.Training School, Munirabad,

Koppal- 583233

**FORM- IV**

**(See Rule 12)**

**NOTICE**

**Dated: 28-07-2014**

It is hereby notified that the undersigned has changed his/her name from **Sri. BABU MURAGEPPA HARIJAN to BABU MURAGEPPA ALUR**

**PD- C/N-137**

**SC-10**

**BABU MURAGEPPA HARIJAN**

ನಮೂನೆ–1

(9ನೇ ನಿಯಮ ನೋಡಿ)

**ಕರ್ನಾಟಕ ಲೋಕಾಯುಕ್ತ**

**ಕರ್ನಾಟಕ ಲೋಕಾಯುಕ್ತ ನಿಬಂಧಕರ ಕಛೇರಿ, ಬೆಂಗಳೂರು**

**ಅಧಿಸೂಚನೆ ದಿನಾಂಕ: 12–12–2015**

**ಶ್ರೀಮತಿ ರೇಣುಕ ಟಿ.ಎನ್. ಕ್ಲರ್ಕ್–ಕಂ–ಟೈಪಿಸ್ಟ್, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು** ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಇವರ ಹೆಸರನ್ನು **ಪ್ರತೀಕ್ಷಾ ಟಿ.ಎನ್.** ಎಂದು ಬದಲಾಯಿಸಲು ಅನುಮತಿ ನೀಡಲಾಗಿದೆ.

**PD C/n 138**

**SC- 10**

**ನಿಬಂಧಕರು,**

ಕರ್ನಾಟಕ ಲೋಕಾಯುಕ್ತ, ಬೆಂಗಳೂರು

**FORM-I**

**(See Rule 9)**

**DEPARTMENT OF POLICE**

**OFFICE OF THE SUPERINTENDENT OF POLICE, VIJAYAPURA**

**NOTIFICATION**

**Dated : 13-02-2015.**

**Sri RACHAPPA GIRIMALLAPPA TALAWAR** Working as CHC-734 in the POLICE Department of Office of THE SUPERINTENDENT OF POLICE, VIJAYAPURA DISTRICT is permitted to change his name to **RACHAPPA GIRIMALLAPPA HONAWAD**

**PD-C/N-139**

**SC-10**

**SUPERINTENDENT OF POLICE,**

**VIJAYAPURA**

## ಸಾರ್ವಜನಿಕ ಶಿಕ್ಷಣ ಇಲಾಖೆ,

## ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಉತ್ತರ ಜಿಲ್ಲೆ

# ನೇಮಕಾತಿ ಅಧಿಸೂಚನೆ

ಸಂಖ್ಯೆ:ಸಿ1ಸಪ್ರಾಶಾಶಿ/ನೇಮಕ 24/2014-15, ದಿನಾಂಕ:23ನೇ ಮಾರ್ಚ 2015

***ವಿಷಯ***: 2014-15ನೇ ಸಾಲಿನಲ್ಲಿ 1-5, ಹಾಗೂ 6-8ನೇ ತರಗತಿ ಸರ್ಕಾರಿ ಪ್ರಾಥಮಿಕ ಶಾಲಾ ಸಹಶಿಕ್ಷಕರ ಮತ್ತು ಸಹಶಿಕ್ಷಕಿ ವೃಂದದ ಹುದ್ದೆಗಳನ್ನು ನೇರ ನೇಮಕಾತಿಯಿಂದ ಜಿಲ್ಲಾ ಮಟ್ಟದ [ಸಂಯುಕ್ತ ಸ್ಪರ್ಧಾತ್ಮಕ] ಪರೀಕ್ಷೆಯ ಮೂಲಕ ಭರ್ತಿ ಮಾಡುವ ಬಗ್ಗೆ.

***ಉಲ್ಲೇಖ***: 1.ಸರ್ಕಾರದ ಅಧಿಕೃತ ಪ್ರಕಟಣೆ ಸಂ:ಇಡಿ:ಡಿಪಿಎಆರ್:41:ಎಸ್ಆರ್ಇ:2001, ದಿನಾಂಕ:09.08.2001.

2] ಸರ್ಕಾರಿ ಆದೇಶ ಸಂ:ಸಿಆಸುಇ:08:ಸಹಿಮ:1995, ದಿನಾಂಕ:20.06.1995.
3] ಸರ್ಕಾರಿ ಆದೇಶ ಸಂ:ಸಿಆಸುಇ:97:ಸನೆನಿ:2002, ದಿನಾಂಕ:22.11.2002.
4] ಸರ್ಕಾರಿ ಆದೇಶ ಸಂ:ಸಿಆಸುಇ:53:ಸೇನೇನಿ:2007, ದಿನಾಂಕ:04.01.2008.
5] ಸರ್ಕಾರಿ ಆದೇಶ ಸಂ:ಇಡಿ:21:ಯೋಯೋಕ:2010, ದಿನಾಂಕ:02.11.2012.
6] ಸರ್ಕಾರಿ ಆದೇಶ ಸಂ:ಇಡಿ:238:ಪಿಬಿಐ:2012, ದಿನಾಂಕ:21.01.2013.
7] ಸರ್ಕಾರಿ ಆದೇಶ ಸಂ:ಸಿಆಸುಇ:50:ಎಸ್.ಆರ್.ಆರ್.:2007, ದಿನಾಂಕ:26.07.2011
8] ಸರ್ಕಾರಿ ಆದೇಶ ಸಂ :ಸಿಆಸುಇ:54:ಎಸ್.ಆರ್.ಆರ್.:2012,ದಿನಾಂಕ:07.08.2012
9] ಸರ್ಕಾರಿ ಆದೇಶ ಸಂ :ಸಿಆಸುಇ: 43: ಹೆಚ್‌ಕೆಸಿ 2013,ದಿನಾಂಕ:29.01.2014
10] ಸರ್ಕಾರಿ ಆದೇಶ ಸಂ : ಸಿಆಸುಇ 33 ಹೈಕಲು 2014,ದಿನಾಂಕ: 10.04.2014
11] ಸರ್ಕಾರಿ ಆದೇಶ ಸಂ:ಇಡಿ:626:ಪಿಬಿಎಸ್:2014, ದಿನಾಂಕ:31.01.2015

ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಪರೀಕ್ಷೆ ಮೂಲಕ ಅಂದರೆ ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ [ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಪಕ್ಷನ್] [ರೆಕ್ರೂಟ್‌ಮೆಂಟ್][ಅಮೆಂಡ್‌ಮೆಂಟ್]ರೂಲ್ಸ್-2001[ಸಂಖ್ಯೆ:ಡಿಪಿಎಆರ್:41:ಎಸ್ಆರ್ಇ:2001,ದಿನಾಂಕ: 09.08.2001]ರ ಹಾಗೂ ಇಡಿ:626:ಪಿಬಿಎಸ್:2014, ದಿನಾಂಕ:31.01.2015 ನಿಯಮಗಳನ್ವಯ ಆಯ್ಕೆ ಮಾಡಲು ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ. ನೇಮಕಾತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನ ಅಂದರೆ ದಿನಾಂಕ: 27-04-2015 ರಂದು ಅರ್ಹರಾಗಿರುವ ಹಾಗೂ ಶಿಕ್ಷಕರ ಅರ್ಹತಾ ಪರೀಕ್ಷೆ (ಟಿ.ಇ.ಟಿ)ಯಲ್ಲಿ ಅರ್ಹತೆಗಳಿಸಿ ಅರ್ಹತಾ ಪ್ರಮಾಣ ಪತ್ರವನ್ನು ಪಡೆದಿರುವ ಅಭ್ಯರ್ಥಿಗಳಿಂದ ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ ಆನ್‌ಲೈನ್ ಮೂಲಕ ಅರ್ಜಿಗಳನ್ನು ಕರೆಯಲಾಗಿದೆ. ಇತರೆ ಬೇರೆ ಯಾವುದೇ ನಮೂನೆಯಲ್ಲಿ ಸಲ್ಲಿಸುವ ಅರ್ಜಿಗಳನ್ನು ನೇಮಕಾತಿಗಾಗಿ ಪರಿಗಣಿಸಲಾಗುವುದಿಲ್ಲ.

ಆಯ್ಕೆ ಮಾಡಲು ಉಲ್ಲೇಖದಲ್ಲಿ ನಮೂದಿಸಿರುವ ನೇಮಕಾತಿ ನಿಯಮಗಳು, ಮೀಸಲಾತಿ ನಿಯಮಗಳು ಹಾಗೂ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರದ ಆದೇಶಗಳ ಪ್ರಕಾರ ಇರುವ ಪ್ರಚಲಿತ ನಿಯಮಗಳನ್ನು ಅನುಸರಿಸಿ ಆಯ್ಕೆ ಮಾಡಲು ಪ್ರಕಟಣೆಯನ್ನು ಸಾರ್ವಜನಿಕರ ತಿಳುವಳಿಕೆಗಾಗಿ ನೀಡಲಾಗಿದೆ.

ಟಿಪ್ಪಣಿ: ಈಗ ಅಧಿಸೂಚಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

***02] ಆಯ್ಕೆಗೆ ಅರ್ಹತೆ:***

ಆಯ್ಕೆಗೆ ಅರ್ಹತೆ ಪಡೆಯಲು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳು ಆಯಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು ಹೊಂದಿರಬೇಕು. ಶಿಕ್ಷಕರ ಅರ್ಹತಾ ಪರೀಕ್ಷೆಯಲ್ಲಿ (ಟಿ.ಇ.ಟಿ) ಅರ್ಹತೆಗಳಿಸಿದ ಅಭ್ಯರ್ಥಿಗಳು ಮಾತ್ರ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ

ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಲ್ಲದೆ, ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಅವರು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ.ಯಲ್ಲಿ ಆ ನೇಮಕಾತಿ ಭಾಷೆಯ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರಬೇಕು ಅಥವಾ ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

### *03] ನಿಗದಿತ ಅರ್ಜಿ ನಮೂನೆ ಸಲ್ಲಿಸುವ ವಿಧಾನ:*

ಅಭ್ಯರ್ಥಿಯು ಆನ್‌ಲೈನ್ [ON LINE] ಮೂಲಕ ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ಮುಖಾಂತರ ಅರ್ಜಿ ಸಲ್ಲಿಸಬೇಕು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶ ಇರುವುದಿಲ್ಲ. ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ [After submission of application] ದೊರೆಯುವ ಗಣಕೀಕೃತ ಅರ್ಜಿ ಸಂಖ್ಯೆಯನ್ನು ಪಡೆದುಕೊಳ್ಳುವುದು ಮತ್ತು ಸದರಿ ಸಂಖ್ಯೆಯನ್ನು ಕಡ್ಡಾಯವಾಗಿ ಬರೆದಿಟ್ಟುಕೊಳ್ಳತಕ್ಕದ್ದು. ಈ ಅರ್ಜಿ ಸಂಖ್ಯೆಯು ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ. ಆನ್ ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ ಮತ್ತು ಚಲನ್ ಪ್ರತಿಗಳ ಮುದ್ರಿತ ಪ್ರತಿಗಳನ್ನು ತೆಗೆದುಕೊಳ್ಳತಕ್ಕದ್ದು. ಮುದ್ರಿತ ಚಲನ್ ಪ್ರತಿಯನ್ನು ಆಧರಿಸಿ ಪರೀಕ್ಷಾ ಶುಲ್ಕವನ್ನು ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಯಾವುದಾದರೂ ಶಾಖೆಯಲ್ಲಿ ಪಾವತಿಸಬಹುದು. ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ. ಹಾಗೂ ಸದರಿ ಶುಲ್ಕವನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಈ ಕೆಳಕಂಡಂತೆ ನಿಗದಿಪಡಿಸಿದ ಅರ್ಜಿ ಶುಲ್ಕವನ್ನು ಕೊನೆಯ ದಿನಾಂಕದೊಳಗೆ ಆನ್‌ಲೈನ್ ಮೂಲಕವೇ ಪಾವತಿಸುವುದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶಪತ್ರಗಳನ್ನು ಮೇಲೆ ನಮೂದಿಸಿರುವ ವೆಬ್‌ಸೈಟ್‌ನಲ್ಲಿ ಡೌನ್‌ಲೋಡ್ ಮಾಡಿಕೊಳ್ಳಬೇಕು. ಪ್ರವೇಶ ಪತ್ರಗಳನ್ನು ಡೌನ್‌ಲೋಡ್ ಮಾಡಿಕೊಳ್ಳಲು ನಿಗದಿಪಡಿಸಿದ ಅವಧಿಯನ್ನು ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಅನ್‌ಲೈನ್ ಅರ್ಜಿಯನ್ನು ಸಲ್ಲಿಸುವಾಗ ಅಭ್ಯರ್ಥಿಗೆ ನೀಡಿರುವ ನೊಂದಣಿ ಸಂಖ್ಯೆ ಮತ್ತು ಇತರೆ ಮಾಹಿತಿಯನ್ನು ವೆಬ್‌ಸೈಟ್‌ನಲ್ಲಿ ನಮೂದಿಸಿ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಡೌನ್‌ಲೋಡ್ ಮಾಡಿಕೊಳ್ಳುವುದು. ಕೊನೆಯ ದಿನಾಂಕದ ನಂತರ ಪಾವತಿಸಿದ ಅರ್ಜಿ ಶುಲ್ಕವನ್ನು ಪರಿಗಣಿಸಲಾಗುವುದಿಲ್ಲ ಮತ್ತು ಸ್ವೀಕರಿಸಲಾಗುವುದಿಲ್ಲ. ಅರ್ಜಿಗಳನ್ನು ಆನ್‌ಲೈನ್ ಮೂಲಕ ಭರ್ತಿ ಮಾಡಬೇಕಾಗಿದ್ದು, ಈ ಬಗ್ಗೆ ಮಾರ್ಗಸೂಚಿಯನ್ನು ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗಿದೆ.

### *04] ಅರ್ಜಿ ಸಲ್ಲಿಸಲು ಪಾವತಿಸಬೇಕಾದ ಶುಲ್ಕ:*

| *ಕ್ರಸ* | *ವಿವರ* | *1-5 ಅಥವಾ 6-8 ಒಂದು ಪರೀಕ್ಷೆಗೆ ( ರೂಗಳಲ್ಲಿ)* | *1-5 ಅಥವಾ 6-8 ಎರಡು ಪರೀಕ್ಷೆಗೆ ( ರೂಗಳಲ್ಲಿ)* |
|---|---|---|---|
| *01* | ಪರಿಶಿಷ್ಠ ಜಾತಿ, ಪರಿಶಿಷ್ಠ ವರ್ಗ, ಪ್ರವರ್ಗ-1/ ಅಂಗವಿಕಲ ಅಭ್ಯರ್ಥಿಗಳಿಗೆ ಸೇರಿದ ಅಭ್ಯರ್ಥಿಗಳಿಗೆ | *250* | *400* |
| *02* | ಇತರೆ ಎಲ್ಲಾ ಅಭ್ಯರ್ಥಿಗಳಿಗೆ | *500* | *800* |

### *05] ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:*

ದಿನಾಂಕ:27-04-2015 ಅಥವಾ ಅದಕ್ಕೂ ಮೊದಲು.

### *06] ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ:*

ಎಲ್ಲಾ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗದಿಪಡಿಸಿದೆ.

ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಹುದ್ದೆಗಳಿಗೆ ಟಿ.ಇ.ಟಿ ಪರೀಕ್ಷೆಯನ್ನು ತೇರ್ಗಡೆಯಾಗಿದ್ದಲ್ಲಿ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳ ಅವಶ್ಯಕತೆ ಇರುವುದಿಲ್ಲ. ಆದರೆ, ಹುದ್ದೆಗಳಿಗೆ ತಮ್ಮ ಆಧ್ಯತೆಯನ್ನು ನಮೂದಿಸಬೇಕು. ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿಯರ ವೃಂದದ ವಿಷಯಗಳ ಹಾಗೂ ವಿವಿಧ ಮಾಧ್ಯಮದ ಬ್ಲಾಕ್‌ವಾರು ಹುದ್ದೆಗಳ ಸಂಖ್ಯೆ ಮತ್ತು ಮೀಸಲಾತಿ ವರ್ಗೀಕರಣದ ವಿವರಗಳನ್ನು ಈ ಅಧಿಸೂಚನೆಗೆ ಲಗತ್ತಿಸಿರುವ ***"ವರ್ಗೀಕರಣದ ಅನುಬಂಧದಲ್ಲಿ"*** ಪ್ರತ್ಯೇಕವಾಗಿ ನೀಡಲಾಗಿದೆ.

***07] ಆಯ್ಕೆಗಾಗಿ 1-5ನೇ ತರಗತಿ ಹಾಗೂ 6-8 ನೇ ತರಗತಿ ಕಿರಿಯ /ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಬೋಧಿಸುವ ಶಿಕ್ಷಕರಿಗೆ ಹುದ್ದೆಗಳು ,ವೇತನ ಶ್ರೇಣಿ: ಅರ್ಹತೆ ಮತ್ತು ಆಯ್ಕೆ ವಿಧಾನವನ್ನು ಈ ಕೆಳಗೆ ನೀಡಲಾಗಿದೆ***

***08] ಅಭ್ಯರ್ಥಿಗಳ ಅರ್ಹತೆ:***

ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ಅರ್ಹತೆಗಳು.

- ***ವಿದ್ಯಾರ್ಹತೆ:***

ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಯು ಉಲ್ಲೇಖ(11)ರ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಗೊಳಿಸಲಾಗಿರುವ ವಿದ್ಯಾರ್ಹತೆ ಹೊಂದಿರಬೇಕು. ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ವಿದ್ಯಾರ್ಹತೆ ವಿವರಗಳು ಕೆಳಗಿನಂತೆ ಇರುತ್ತವೆ.

***01.*** ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ], ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

***02.*** ಹುದ್ದೆಗಳ ಸಂಖ್ಯೆ ಹಾಗೂ ವಿಷಯಗಳು ಸಂಬಂಧಿಸಿದ ಅಧಿಸೂಚನೆಯಲ್ಲಿ ನಮೂದಿಸಿರುವ ಮ್ಯಾಟ್ರಿಕ್ಸ್‌ಗೆ ಅನುಗುಣವಾಗಿರುತ್ತದೆ. ಮ್ಯಾಟ್ರಿಕ್ಸ್ ಪ್ರತಿಯನ್ನು ಮಾಹಿತಿ ಪುಸ್ತಕದೊಂದಿಗೆ ಲಗತ್ತಿಸಿದೆ.

***ವೇತನ ಶ್ರೇಣಿ-[13600-26000]:-***

13600-300-14200-350-15600-400-17200-450-19000-500-21000-600-24600-700-26000

***I ಪ್ರಾಥಮಿಕ ಶಾಲಾ 1-5ನೇ ತರಗತಿಗಾಗಿ ಸರ್ಕಾರಿ ಕಿರಿಯ/ಹಿರಿಯ ಪ್ರಾಥಮಿಕ ಶಾಲೆಗೆ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ] ಹುದ್ದೆಗಳಿಗೆ:***

***ಅ.*** ಅಭ್ಯರ್ಥಿಯು ಗೊತ್ತುಪಡಿಸಿದ ಮಂಡಳಿಯು ನಡೆಸುವ ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಸಾಮಾನ್ಯ ಹಾಗೂ ಹಿಂದುಳಿದ ಅಭ್ಯರ್ಥಿಗಳೂ ಕನಿಷ್ಟ ಶೇಕಡ 50%ನ್ನು ಹಾಗೂ. ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ 45% ಅಂಕಗಳೊಂದಿಗೆ ತೇರ್ಗಡೆ ಹೊಂದಿರಬೇಕು. ಮತ್ತು ಎರಡು ವರ್ಷದ ಡಿ.ಇಡಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರತಕ್ಕದ್ದು

ಅಥವಾ

ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ ಶೇಕಡ 45% ನ್ನು **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳನ್ನು ನಾಲ್ಕು ವರ್ಷದ ಬ್ಯಾಚುಲರ್ ಆಫ್ ಎಲೆಮೆಂಟರಿ ಎಜುಕೇಷನ್‌ನ ವಿದ್ಯಾರ್ಹತೆ ಹೊಂದಿರತಕ್ಕದ್ದು

ಅಥವಾ

ಮಂಡಳಿಯು ನಡೆಸುವ ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ 45 % **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳನ್ನು ಪಡೆದಿರತಕ್ಕದ್ದು ಮತ್ತು ಎನ್.ಸಿ.ಟಿ.ಇ ನಿಯಮಗಳ ರೀತ್ಯಾ ಎರಡು ವರ್ಷದ ಡಿಪ್ಲೋಮೋ ಇನ್ ಎಜುಕೇಷನ್ ( ಸ್ಪೆಷಲ್ ಎಡುಕೇಷನ್)ನ್ನು ಹೊಂದಿರತಕ್ಕದ್ದು

ಮತ್ತು

ಸರ್ಕಾರವು ಗೊತ್ತುಪಡಿಸಿದ ಸಕ್ಷಮ ಪ್ರಾಧಿಕಾರಿಯು ನಡೆಸುವ ಶಿಕ್ಷಕರ ಅರ್ಹತಾ ಪರೀಕ್ಷೆ ಪೇಪರ್-01 ರಲ್ಲಿ ತೇರ್ಗಡೆಹೊಂದಿರತಕ್ಕದ್ದು

ಹಾಗೂ

ಸರ್ಕಾರಿ ಕಿರಿಯ ಹಾಗೂ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 1-5ನೇ ತರಗತಿ ಬೋದಿಸಲು ಅರ್ಜಿಸಲ್ಲಿಸುವ ಅಭ್ಯರ್ಥಿಯು ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಸಾಮಾನ್ಯ ( ಕನ್ನಡ, ಉರ್ದು.ತೆಮಿಳ್, ತೆಲುಗು, ಬಂಗಾಲಿ ಅಥವಾ ಮರಾಠಿ) ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ / ಡಿ.ಇಡಿ./ ತತ್ಸಮಾನ ಪರೀಕ್ಷೆಯಲ್ಲಿ ಅಭ್ಯಾಸ ಮಾಡಿರಬೇಕು. ಅಥವಾ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡಿರಬೇಕು.

ಅಥವಾ

***ಕನ್ನಡ ಮಾಧ್ಯಮದ ಶಾಲೆಗಳ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

## *II 6-8 ನೇ ತರಗತಿಯಲ್ಲಿನ ಉನ್ನತೀಕರಿಸಿದ ಪ್ರಾಥಮಿಕ ಶಾಲೆಗಳಿಗೆ ಪದವೀಧರ ಸಹಶಿಕ್ಷಕರ ನೇಮಕಾತಿ*

***01.*** ಪ್ರಾಥಮಿಕ ಶಾಲಾ ಪದವೀದರ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ], ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

***02.*** ಹುದ್ದೆಗಳ ಸಂಖ್ಯೆ ಹಾಗೂ ವಿಷಯಗಳು ಸಂಬಂಧಿಸಿದ ಅಧಿಸೂಚನೆಯಲ್ಲಿ ನಮೂದಿಸಿರುವ ಮ್ಯಾಟ್ರಿಕ್ಸ್‌ಗೆ ಅನುಗುಣವಾಗಿರುತ್ತದೆ. ಮ್ಯಾಟ್ರಿಕ್ಸ್ ಪ್ರತಿಯನ್ನು ಮಾಹಿತಿ ಪುಸ್ತಕದೊಂದಿಗೆ ಲಗತ್ತಿಸಿದೆ.

***ವೇತನ ಶ್ರೇಣಿ–[14550–26700]:–***

***ವೇತನಶ್ರೇಣಿ–[14550–***350–15600–400–17200–450–19000–500–21000–600–24600–700***–26700]:***

### *02] ಆಯ್ಕೆಗೆ ಅರ್ಹತೆ:*

ಆಯ್ಕೆಗೆ ಅರ್ಹತೆ ಪಡೆಯಲು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳು ಆಯಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿ ಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು ಹೊಂದಿರಬೇಕು. ಶಿಕ್ಷಕರ ಅರ್ಹತಾ ಪರೀಕ್ಷೆಯಲ್ಲಿನ (ಟಿ.ಇ.ಟಿ) ಪೇಪರ್–2ನಲ್ಲಿ ಅರ್ಹತೆಗಳಿಸಿದ ಅಭ್ಯರ್ಥಿಗಳು ಮಾತ್ರ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಲ್ಲದೆ, ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಅವರು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ./ ಡಿಇಡಿ/ಬಿಇಡಿ ಯಲ್ಲಿ ಆ ನೇಮಕಾತಿ ವಿಷಯದ ಭಾಷಾ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರಬೇಕು ಅಥವಾ ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

### *I ಪ್ರಾಥಮಿಕ ಶಾಲಾ 6–8ನೇ ತರಗತಿ ಪದವೀಧರ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ] ಹುದ್ದೆಗಳಿಗೆ:*

**ಅ.** ಹಿರಿಯ ಪ್ರಾಥಮಿಕ ಶಾಲೆಯಲ್ಲಿನ ಪದವೀದರ ಶಿಕ್ಷಕರ ನೇಮಕಾತಿಗಾಗಿ ಅಭ್ಯರ್ಥಿಯು ಬಿಎ ಪದವಿಯನ್ನು ಮತ್ತು ಎರಡು ವರ್ಷದ ಡಿ.ಇಡಿ ಪರೀಕ್ಷೆಯನ್ನು ತೇರ್ಗಡೆ ಹೊಂದಿರಬೇಕು.

ಅಥವಾ

ಬಿಎ ಪದವಿಯಲ್ಲಿ ಶೇಕಡ 50% ಅಂಕಗಳನ್ನು ಮತ್ತು ಒಂದು ವರ್ಷದ ಬಿ.ಇಡಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

ಅಥವಾ

ಪಿ.ಯು.ಸಿ ಯಲ್ಲಿ ಶೇಕಡ 50% ಅಂಕಗಳೊಂದಿಗೆ 04 ವರ್ಷದ ಬ್ಯಾಚುಲರ್ ಆಫ್ ಎಲಿಮೆಂಟರಿ ಎಜುಕೇಷನ್ (ಬಿ.ಎಲ್.ಇಡಿ)ನಲ್ಲಿ ಉತ್ತೀರ್ಣರಾಗಿರಬೇಕು

ಅಥವಾ

ಪಿ.ಯು.ಸಿ ಯಲ್ಲಿ ಶೇಕಡ 50% ಅಂಕಗಳು ಹಾಗೂ 04 ವರ್ಷದ ಬ್ಯಾಚುಲರ್ ಆಫ್ ಎಜುಕೇಷನ್( ಬಿಎ.ಇಡಿ) ನಲ್ಲಿ ಉತ್ತೀರ್ಣರಾಗಿರಬೇಕು

ಅಥವಾ

ಬಿ.ಎ ಪದವಿಯಲ್ಲಿ ಮತ್ತು ಒಂದು ವರ್ಷದ ಬಿಇಡಿ (ಸ್ಪೆಷಲ್ ಎಜುಕೇಷನ್) ನಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ ಶೇಕಡ 45% ಅಂಕಗಳನ್ನು **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳನ್ನು ಪದವಿಯಲ್ಲಿ ಹೊಂದಿರತಕ್ಕದ್ದು

ಮತ್ತು

ಸರ್ಕಾರ ಗೊತ್ತುಪಡಿಸಿದ ಸಕ್ಷಮ ಪ್ರಾಧಿಕಾರಿಯು ನಡೆಸಿರುವ ಶಿಕ್ಷಕರ ಅರ್ಹತಾ ಪರೀಕ್ಷೆ (ಪೇಪರ್–2) ನ್ನು ತೇರ್ಗಡೆಹೊಂದಿರತಕ್ಕದ್ದು

ಮತ್ತು

ಆ. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 6–8ನೇ ತರಗತಿ ಬೋಧಿಸಲು ಅರ್ಜಿಸಲ್ಲಿಸುವ ಅಭ್ಯರ್ಥಿಯು ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಸಾಮಾನ್ಯ (ಕನ್ನಡ, ಉರ್ದು, ತಮಿಳ್, ತೆಲುಗು, ಬಂಗಾಲಿ ಅಥವಾ ಮರಾಠಿ) ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿ/ ಡಿಇಡಿ/ ಬಿಇಡಿ ತತ್ಸಮಾನ ಪರೀಕ್ಷೆಯಲ್ಲಿ ಅಭ್ಯಾಸ ಮಾಡಿರಬೇಕು. ಅಥವಾ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿಯಲ್ಲಿ ಅಬ್ಯಾಸ ಮಾಡಿರಬೇಕು.

ಅಥವಾ

***ಕನ್ನಡ ಮಾಧ್ಯಮದ ಶಾಲೆಗಳ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***II ಪ್ರಾಥಮಿಕ ಶಾಲಾ 6–8ನೇ ತರಗತಿ ಪದವೀಧರ ಸಹಶಿಕ್ಷಕ/ಶಿಕ್ಷಕಿ [ಆಂಗ್ಲ ಭಾಷೆ] ಹುದ್ದೆಗಳಿಗೆ:***

***01.*** 03 ವರ್ಷದ ಕಲಾ/ ವಿಜ್ಞಾನ ಪದವಿಯಲ್ಲಿ ಶೇಕಡಾ 50% ಅಂಕಗಳನ್ನು ಮತ್ತು ಆಂಗ್ಲಭಾಷೆಯನ್ನು ಒಂದು ಐಚ್ಚಿಕ ವಿಷಯವಾಗಿ ಮೂರು ವರ್ಷದ ಪದವಿಯಲ್ಲಿ ಅಭ್ಯಾಸಮಾಡಿರಬೇಕು

.

***ಅಥವಾ***

ಬಿಎ.ಇಡಿ/ ಬಿಎಸ್ಸಿ ಇಡಿ ಪದವಿಯಲ್ಲಿ ಕನಿಷ್ಟ ಶೇಕಡಾ 50% ಅಂಕಗಳನ್ನು ಮತ್ತು ಆಂಗ್ಲಭಾಷೆಯನ್ನು ಒಂದು ಐಚ್ಚಿಕ ವಿಷಯವಾಗಿ ಅಭ್ಯಾಸಮಾಡಿರಬೇಕು

***ಅಥವಾ***

ಪಿಯುಸಿ. ವಿಜ್ಞಾನ (ಪಿ.ಸಿ.ಎಂಬಿ)ಯಲ್ಲಿ ಶೇಕಡಾ 50% ಅಂಕಗಳನ್ನು ಮತ್ತು 04 ವರ್ಷದ ಬ್ಯಾಚುಲರ್ ಇನ್ ಎಲಿಮೆಂಟರಿ ಎಜುಕೇಷನ್( ಬಿ.ಎಲ್.ಇಡಿ) ನಲ್ಲಿ ಉತ್ತೀರ್ಣರಾಗಿರಬೇಕು ಹಾಗೂ ಆಂಗ್ಲಭಾಷೆಯನ್ನು ಐಚ್ಚಿಕ ವಿಷಯವಾಗಿ 03 ವರ್ಷದ ಪದವಿಯಲ್ಲಿ ಅಭ್ಯಾಸಮಾಡಿರಬೇಕು

ಮತ್ತು

ಅ) ಬಿಇಡಿ/ ಡಿಇಡಿ ಯಲ್ಲಿ ಆಂಗ್ಲಭಾಷೆಯನ್ನು ಬೋಧನಾ ವಿಷಯವಾಗಿ ಅಭ್ಯಾಸಮಾಡಿರಬೇಕು ( Method of teaching)

***ಅಥವಾ***

ಒಂದು ವರ್ಷದ ಬ್ಯಾಚುಲರ್ ಆಫ್ ಎಜುಕೇಷನ್ ಬಿಇಡಿ ಪದವಿ ( ಸ್ಪೆಷಲ್ ಎಜುಕೇಷನ್) ನಲ್ಲಿ ಆಂಗ್ಲಭಾಷೆಯನ್ನು ಬೋಧನಾ ವಿಷಯವಾಗಿ ಅಭ್ಯಾಸಮಾಡಿರಬೇಕು ( Method of teaching)

***ಅಥವಾ***

ಆಂಗ್ಲಭಾಷೆಯನ್ನು ಐಚ್ಚಿಕ ವಿಷಯವಾಗಿ ಬಿಎ(ಕಲಾ) ಮತ್ತು ಬಿ.ಎಸ್ಸಿ (ವಿಜ್ಞಾನ) ಪದವಿಯಲ್ಲಿ ಅಬ್ಯಾಸಮಾಡಿರಬೇಕು ಮತ್ತು ಬಿಇಡಿ ಪದವಿಯಲ್ಲಿ/ ಎರಡು ವರ್ಷದ ಡಿಇಡಿಯಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ ಶೇಕಡ 45% ನ್ನು **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳೊಂದಿಗೆ ಮೂರು ವರ್ಷದ ಪದವಿಯಲ್ಲಿ ಆಂಗ್ಲಭಾಷೆಯನ್ನು ಐಚ್ಚಿಕ ವಿಷಯವಾಗಿ ಅಬ್ಯಾಸಮಾಡಿರಬೇಕು

ಮತ್ತು

ಅ) ಸರ್ಕಾರ ಗೊತ್ತುಪಡಿಸಿದ ಸಕ್ಷಮ ಪ್ರಾಧಿಕಾರಿಯು ನಡೆಸಿರುವ ಶಿಕ್ಷಕರ ಅರ್ಹತಾ ಪರೀಕ್ಷೆ (ಪೇಪರ್–2) ನ್ನು ತೇರ್ಗಡೆಹೊಂದಿರತಕ್ಕದ್ದು

***ಆ) ಕಲಾ/ ವಿಜ್ಞಾನ ವಿಷಯದ ಪದವಿಯಲ್ಲಿ*** ಆಂಗ್ಲಭಾಷೆಯನ್ನು ಐಚ್ಛಿಕ ವಿಷಯವಾಗಿ ಅಭ್ಯಾಸಮಾಡದಿದ್ದಲ್ಲಿ

ಅ) ಯು.ಜಿಸಿ ಯಿಂದ ಮಾನ್ಯತೆ ಪಡೆದ ಅಂಗೀಕೃತ ವಿಶವಿದ್ಯಾಲಯದಿಂದ ಸ್ನಾತಕೋತ್ತರ ಪದವಿಯಲ್ಲಿ ಆಂಗ್ಲ ಭಾಷೆಯನ್ನು ಅಬ್ಯಾಸಮಾಡಿರಬೇಕು

ಅಥವಾ

ಆಂಗ್ಲ ಭಾಷಾ ಹುದ್ದೆಗೆ ಅಭ್ಯರ್ಥಿಗಳು ರೀಜನಲ್ ಇನ್‌ಸ್ಟಿಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾ ಇವರು ನಡೆಸುವ ಪೋಸ್ಟ್ ಗ್ರಾಜುಯೇಟ್ ಡಿಪ್ಲೊಮೋ ಇನ್ ಇಂಗ್ಲಿಷ್ ಪ್ರಮಾಣ ಪತ್ರವನ್ನು ಹೊಂದಿದ್ದಲ್ಲಿ ಪರಿಗಣಿಸಲಾಗುವುದು

ಮತ್ತು

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 6–8ನೇ ತರಗತಿ ಬೋಧಿಸಲು ಅರ್ಜಿಸಲ್ಲಿಸುವ ಅಭ್ಯರ್ಥಿಯು ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿ/ ಡಿಇಡಿ/ ಬಿಇಡಿ ತತ್ಸಮಾನ ಪರೀಕ್ಷೆಯಲ್ಲಿ ಅಭ್ಯಾಸ ಮಾಡಿರಬೇಕು. ಅಥವಾ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿಯಲ್ಲಿ ಅಬ್ಯಾಸ ಮಾಡಿರಬೇಕು.

***C&R Rules ನಲ್ಲಿ "Note: Primary School Assistant Masters / Misters [Science], [English], [Hindi], in primary, Higher Primary and Model Higher Primary School shall form port of the General cadre and they shall teach other subjects also in addition to science / English / Hindi to make up the normal work load for the teacher"*** *ಎಂದಿರುತ್ತದೆ.*

ಆದ್ದರಿಂದ ಪ್ರಾಥಮಿಕ, ಹಿರಿಯ ಮಾದರಿ ಹಾಗೂ ಉನ್ನತೀಕರಿಸಿದ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ವಿಜ್ಞಾನ / ಆಂಗ್ಲ / ಹಿಂದಿ ಪ್ರಾಥಮಿಕ ಶಾಲಾ ಸಹಶಿಕ್ಷಕರು ಸಾಮಾನ್ಯ ಶಿಕ್ಷಕರ ಹುದ್ದೆಯ ಭಾಗವಾಗಿರುತ್ತಾರೆ. ಈ ಶಿಕ್ಷಕರು ಕಾರ್ಯಭಾರ ಹೊಂದಾಣಿಕೆಗೆ ವಿಜ್ಞಾನ / ಆಂಗ್ಲ / ಹಿಂದಿ ವಿಷಯಗಳೊಂದಿಗೆ ಇತರೆ ವಿಷಯಗಳನ್ನು ಸಹಾ ಸಂಬಂಧಿಸಿದ ಶಾಲಾ ಮಾಧ್ಯಮಗಳಲ್ಲಿ ಬೋಧಿಸತಕ್ಕದ್ದು.

***ಸೂಚನೆ:*** ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗುವುದಿಲ್ಲ. ನಿಗದಿ ಪಡಿಸಿದ ಕೊನೆಯ ದಿನಾಂಕದಂದು ವಿದ್ಯಾರ್ಹತೆಯ ಅಂಕಪಟ್ಟಿ ಹಾಗೂ ಇತರೆ ಸರ್ಟಿಫಿಕೇಟ್‌ಗಳನ್ನು ಪಡೆದಿರಬೇಕು.

### *09] ವಯೋಮಿತಿ:*

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

***[ಅ]*** ಕನಿಷ್ಠ 18ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

***[ಆ]*** ಗರಿಷ್ಠ ವಯೋಮಿತಿ:

| | |
|---|---|
| ಸಾಮಾನ್ಯ ವರ್ಗ | 40 ವರ್ಷ |
| 2ಎ, 2ಬಿ, 3ಎ, 3ಬಿ | 43 ವರ್ಷ |
| ಪ.ಜಾ/ಪ.ಪಂ/ಪ್ರವರ್ಗ–1 | 45 ವರ್ಷ |

***ಸೂಚನೆ:*** ಗೌರವ ಶಿಕ್ಷಕರಿಗೆ ಗರಿಷ್ಠ ವಯೋಮಿತಿ ಅನ್ವಯಿಸುವುದಿಲ್ಲ.

### *ಟಿಪ್ಪಣಿ: ಗೌರವ ಶಿಕ್ಷಕರೆಂದರೆ:*

ಜಿಲ್ಲಾ ಪಂಚಾಯತ್ / ಮಂಡಲ ಪಂಚಾಯತ್ ವತಿಯಿಂದ ನೇಮಕಾತಿ ಹೊಂದಿ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯ ನಿರ್ವಹಿಸಿರಬೇಕು / ನಿರ್ವಹಿಸುತ್ತಿರಬೇಕು. ಹಾಗೂ ಗೌರವಧನವನ್ನು ಜಿಲ್ಲಾ ಪಂಚಾಯತ್ / ಮಂಡಲ ಪಂಚಾಯತ್ ವತಿಯಿಂದ ಪಡೆದಿರಬೇಕು / ಪಡೆಯುತ್ತಿರಬೇಕು. ಖಾಸಗಿ ಶಾಲೆಗಳಲ್ಲಿ ಮತ್ತು ಇತರ ಇಲಾಖೆಗಳಲ್ಲಿ ಗೌರವ ಶಿಕ್ಷಕರಾಗಿ ಕಾರ್ಯ ನಿರ್ವಹಿಸಿರುವವರು ಕೃಪಾಂಕ ಪಡೆಯಲು ಅರ್ಹರಿರುವುದಿಲ್ಲ.

***10] ಅರ್ಹತೆ [ಮೆರಿಟ್] ನಿರ್ಧರಿಸುವ ವಿಧಾನ:***

***ಎ] 1-5ನೇ ತರಗತಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ***

- ಟಿಇಟಿ ಪರೀಕ್ಷೆಯ ಪೇಪರ್-1 ನ್ನು ಕಡ್ಡಾಯವಾಗಿ ತೇರ್ಗಡೆಯಾಗಿರಬೇಕು
- ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ದ್ವಿತೀಯ ಪಿ.ಯು.ಸಿ.ಯಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಪ್ರಥಮ ಮತ್ತು ದ್ವಿತೀಯ ಟಿ.ಸಿ.ಹೆಚ್ / ಡಿ.ಇಡಿ.,ಗಳ ಬಾಹ್ಯ ಅಂಕಗಳು ಪಿ.ಯು.ಸಿ ಎಜುಕೇಷನ್ ಪರೀಕ್ಷೆಗಳಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾ ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಎಸ್.ಎಸ್.ಎಲ್.ಸಿ / ದ್ವಿತೀಯ ಪಿ.ಯು.ಸಿ ಶೇಕಡಾ ಅಂಕಗಳ ಶೇಕಡಾ 35% + ಎರಡು ವರ್ಷಗಳ ಟಿ.ಸಿ.ಹೆಚ್ / ಡಿ.ಇಡಿ., ಬಾಹ್ಯ ಅಂಕಗಳ ಶೇಕಡಾ ಅಂಕ / ಪಿ.ಯು.ಸಿ ಎಜುಕೇಷನ್‌ನ ದ್ವಿತೀಯ ಪರೀಕ್ಷೆಯ ಶೇಕಡಾ ಅಂಕಗಳ 15 % + ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡಾ ಅಂಕಗಳ 35% ಹಾಗೂ ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಶೇಕಡ ಅಂಕಗಳ 15% ವೇಟೇಜ್ (weightage)ಇವುಗಳ ಸರಾಸರಿ ಆಧರಿಸಿ ಮೆರಿಟನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಸೇವೆ ಸಲ್ಲಿಸಿದ್ದಲ್ಲಿ / ಸಲ್ಲಿಸುತ್ತಿದ್ದಲ್ಲಿ ಇವರಿಗೆ ಪೂರ್ಣಗೊಂಡ ಪ್ರತಿ ವರ್ಷದ ಸೇವಾ ಅವಧಿಗೆ 3 ಕೃಪಾಂಕಗಳಂತೆ ಗರಿಷ್ಠ 15 ಕೃಪಾಂಕಗಳ ಮಿತಿಗೆ ಒಳಪಟ್ಟ ಕೃಪಾಂಕಗಳನ್ನು ನೀಡಲಾಗುವುದು.
- ಗೌರವ ಶಿಕ್ಷಕರು / ಅರೆಕಾಲಿಕ ಶಿಕ್ಷಕರಾಗಿದ್ದಲ್ಲಿ ಸಂಬಂಧಿಸಿದ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಸಲ್ಲಿಸಬೇಕು.
- ಸರಾಸರಿ ಶೇಕಡಾವಾರು ಅಂಕಕ್ಕೆ ಅಭ್ಯರ್ಥಿಯ ಕೃಪಾಂಕಗಳನ್ನು ಸೇರಿಸಲಾಗುವುದು. [ಕೃಪಾಂಕಕ್ಕೆ ಅಭ್ಯರ್ಥಿಯು ಅರ್ಹರಿದ್ದಲ್ಲಿ ಮಾತ್ರ] ಈ ಒಟ್ಟು ಅಂಕಗಳನ್ನು ಅರ್ಹತಾ ಅಂಕವೆಂದು ಪರಿಗಣಿಸಲಾಗುತ್ತದೆ.

***ಬಿ] 6-8 ನೇ ತರಗತಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ***

- ಟಿಇಟಿ ಪರೀಕ್ಷೆಯ ಪೇಪರ್-2ನ್ನು ಕಡ್ಡಾಯವಾಗಿ ತೇರ್ಗಡೆಯಾಗಿರಬೇಕು
- ಪದವೀಧರ ಸಹಶಿಕ್ಷಕರ (ಸಾಮಾನ್ಯ) ಹುದ್ದೆಗೆ ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ಪದವಿಯಲ್ಲಿ ಎಲ್ಲಾ ವರ್ಷಗಳಲ್ಲಿ/ಸೆಮಿಸ್ಟರ್‌ಗಳಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಡಿಇಡಿ/ಬಿಇಡಿ , ಡಿಇಡಿ/ಬಿಇಡಿ ಸ್ಪೆಷಲ್ ಎಜುಕೇಷನ್ ಪರೀಕ್ಷೆಗಳಲ್ಲಿ ಗಳಿಸಿದ ಒಟ್ಟು ಬಾಹ್ಯ ಅಂಕಗಳ ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾ ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಬಿಎ/ಬಿಎಸ್ಸಿ ತತ್ಸಮಾನ ಪದವಿ ಯಲ್ಲಿನ ಶೇಕಡಾ ಅಂಕಗಳ ಶೇಕಡಾ 35% + ಎರಡು ವರ್ಷಗಳ ಡಿಇಡಿ/ ಬಿಇಡಿ./ ಸ್ಪೆಷಲ್ ಡಿಇಡಿ/ಬಿಇಡಿ ಬಾಹ್ಯ ಅಂಕಗಳ ಶೇಕಡಾ ಅಂಕ ಪರೀಕ್ಷೆಯ ಶೇಕಡಾ ಅಂಕಗಳ 15 % + ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡಾ ಅಂಕಗಳ 35% ಹಾಗೂ ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಶೇಕಡ ಅಂಕಗಳ 15% ವೇಟೇಜ್ (weightage)ಇವುಗಳ ಸರಾಸರಿ ಆಧರಿಸಿ ಮೆರಿಟನ್ನು ಲೆಕ್ಕ ಹಾಕಲಾಗುವುದು.
- ***ಸೂಚನೆ:*** ಸರ್ಕಾರದ ಅನುಮೋದನೆಯಂತೆ ಆಯುಕ್ತರ ಅಧಿಕೃತ ಜ್ಞಾಪನ ಸಂಖ್ಯೆ:ಸಿ3[1]ಪ್ರಾಶಿ:ನೇ:20[ಎ]:ಭಾಗ-3: 2005-06, ದಿನಾಂಕ:03.11.2006ರ ಪ್ರಕಾರ ಟಿ.ಸಿ.ಹೆಚ್., ಮತ್ತು ಡಿ.ಇಡಿ., ಪರೀಕ್ಷೆಗಳ ಅಂತರಿಕ ಮೌಲ್ಯಮಾಪನ ಅಂಕಗಳನ್ನು ಹೊರತುಪಡಿಸಿ ಕೇವಲ ಬಾಹ್ಯ ಅಂಕಗಳನ್ನು ಮಾತ್ರ ಆಯ್ಕೆಗೆ ಪರಿಗಣಿಸಲಾಗುವುದು.

- ಅಭ್ಯರ್ಥಿಯು ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಸೇವೆ ಸಲ್ಲಿಸಿದ್ದಲ್ಲಿ / ಸಲ್ಲಿಸುತ್ತಿದ್ದಲ್ಲಿ ಇವರಿಗೆ ಪೂರ್ಣಗೊಂಡ ಪ್ರತಿ ವರ್ಷದ ಸೇವಾ ಅವಧಿಗೆ 3 ಕೃಪಾಂಕಗಳಂತೆ ಗರಿಷ್ಠ 15 ಕೃಪಾಂಕಗಳ ಮಿತಿಗೆ ಒಳಪಟ್ಟ ಕೃಪಾಂಕಗಳನ್ನು ನೀಡಲಾಗುವುದು.
- ಗೌರವ ಶಿಕ್ಷಕರು / ಅರೆಕಾಲಿಕ ಶಿಕ್ಷಕರಾಗಿದ್ದಲ್ಲಿ ಸಂಬಂಧಿಸಿದ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಸಲ್ಲಿಸಬೇಕು.
- ಸರಾಸರಿ ಶೇಕಡಾವಾರು ಅಂಕಕ್ಕೆ ಅಭ್ಯರ್ಥಿಯ ಕೃಪಾಂಕಗಳನ್ನು ಸೇರಿಸಲಾಗುವುದು. [ಕೃಪಾಂಕಕ್ಕೆ ಅಭ್ಯರ್ಥಿಯು ಅರ್ಹರಿದ್ದಲ್ಲಿ ಮಾತ್ರ] ಈ ಒಟ್ಟು ಅಂಕಗಳನ್ನು ಅರ್ಹತಾ ಅಂಕವೆಂದು ಪರಿಗಣಿಸಲಾಗುತ್ತದೆ.

****** ಅರ್ಜಿ ಭರ್ತಿಮಾಡಲು ಕೊಟ್ಟಿರುವ ಸೂಚನೆಗಳನ್ನು ಗಮನಿಸುವುದು.***

## *11] ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು: [ಅ]*

| | | | |
|---|---|---|---|
| *01.* | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | : | ನಮೂನೆ–ಡಿ [ನಿಯಮ–3.ಎ(2)(3)], ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:132:ಎಸ್‌ಎಡಿ:1997, ದಿನಾಂಕ:08.02.2000 |
| *02.* | ಹಿಂದುಳಿದ ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳು. | : | ನಮೂನೆ–ಇ [ನಿಯಮ–3.ಎ(2)(3)], ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:132:ಎಸ್‌ಎಡಿ:1997, ದಿನಾಂಕ:08.02.2000 |
| *03.* | ಹಿಂದುಳಿದ ಪ್ರವರ್ಗ–2.ಎ, 2.ಬಿ, 3.ಎ ಮತ್ತು 3.ಬಿ ಈ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು. | : | ನಮೂನೆ–ಎಫ್ [ನಿಯಮ–3.ಎ(2)(3)] ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:126:ಎಸ್‌ಎಡಿ:1997, ದಿನಾಂಕ:13.02.2003 |

ಅಭ್ಯರ್ಥಿಗಳು ಮೇಲೆ ನಿಗದಿಪಡಿಸಿರುವ ನಿಗದಿತ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರವಿರಬೇಕು ಮತ್ತು ಅವಧಿ ಮೀರಿದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

***[ಆ]*** ಮೇಲೆ ವಿವರಿಸಿರುವ ಪ್ರಕಾರ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ "ಸಮತಳ ಮೀಸಲಾತಿ" [Horizontal reservation] ಅನ್ವಯ ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | | |
|---|---|---|---|
| ***01.*** | ಮಾಜಿ ಸೈನಿಕರಿಗೆ | ಶೇಕಡಾ–10 | ಕರ್ನಾಟಕ ಸಿವಿಲ್ ಸರ್ವೀಸಸ್ [ಜನರಲ್ ರೆಕ್ರೂಟ್‌ಮೆಂಟ್] ರೂಲ್ಸ್ 1977ರ ನಿಯಮ–9[1]ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| ***02.*** | ಅಂಗವಿಕಲರಿಗೆ | ಶೇಕಡಾ–5 | ಕರ್ನಾಟಕ ಸಿವಿಲ್ ಸರ್ವೀಸಸ್ [ಜನರಲ್ ರೆಕ್ರೂಟ್‌ಮೆಂಟ್] ರೂಲ್ಸ್ 1977ರ ನಿಯಮ–9[1][ಎ]ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| ***03.*** | ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದವರ ಅಭ್ಯರ್ಥಿಗಳಿಗಾಗಿ | ಶೇಕಡಾ–5 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:23:ಎಸ್‌ಆರ್‌ಆರ್:1999 ದಿನಾಂಕ:23.11.2000 ಮತ್ತು ಸಂಖ್ಯದ:ಸಿಆಸುಇ:97:ಸೇನಿನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| ***04.*** | ಗ್ರಾಮೀಣ ಅಭ್ಯರ್ಥಿಗಳಿಗೆ | ಶೇಕಡಾ–25 | 2000ದ ಕರ್ನಾಟಕ ಗ್ರಾಮಿಣ ಅಭ್ಯರ್ಥಿಗಳಿಗಾಗಿ [ರಾಜ್ಯ ಸಿವಿಲ್ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿ ವಿದೇಯಕ] ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನಿನಿ:2002 ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |

| | | | |
|---|---|---|---|
| ***05.*** | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇಕಡಾ–5 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:71:ಎಸ್‌ಆರ್‌ಆರ್:2001 ದಿ:24.10.2002 ಮತ್ತು ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| ***06.*** | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡಾ– 50 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:41:ಎಸ್‌ಆರ್‌ಇ: 2001, ದಿನಾಂಕ:09.08.2001ರ ಪ್ರಕಾರ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರಲಾಗಿದ್ದು, ಮಹಿಳೆಯರಿಗೆ ಪ್ರತಿ ಗುಂಪಿನಲ್ಲೂ ಶೇಕಡಾ 50% ಹುದ್ದೆಗಳನ್ನು ಮೀಸಲಿಸಲಾಗಿದೆ. ಮತ್ತು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿನಾಂಕ:01.04.2008. |

***12] ಮಾಜಿ ಸೈನಿಕ ಅಭ್ಯರ್ಥಿಗಳು:***

"ಮಾಜಿ ಸೈನಿಕ"ರಿಗಾಗಿ ಮೀಸಲಿಟ್ಟ ಖಾಲಿ ಹುದ್ದೆಗಳನ್ನು ಮಿಲಿಟರಿ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿಗಳಿಂದ ಮತ್ತು ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರಿಂದ ನೇಮಕಾತಿ ಮೂಲಕ ತುಂಬಲಾಗುತ್ತದೆ.

***ಮಾಜಿ ಸೈನಿಕರ ಗುಂಪಿನಲ್ಲಿ ಕೆಳಕಂಡವರು ಆಯ್ಕೆಗೆ ಅರ್ಹರು:***

***01. ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ [ಯೋಧ ಅಥವಾ ಅಯೋಧನಾಗಿ] ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:***

***[ಅ]*** ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

ಅಥವಾ

***[ಆ]*** ವೈಧ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈಧ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗೆಡೆಯಾದ ವ್ಯಕ್ತಿ.

ಅಥವಾ

***[ಇ]*** ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

ಅಥವಾ

***[ಈ]*** ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

***02. ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:***

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು. [ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು, ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ, ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ]

***03. ಮಾಜಿ ಸೈನಿಕ ಗುಂಪಿನಲ್ಲಿ ಆಯ್ಕೆ ಹೊಂದಲು ಈ ಕೆಳಕಂಡವರು ಅರ್ಹರಲ್ಲ:***

[ಅ] ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕೋರ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.

[ಆ] ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ
ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

***ಸೂಚನೆ: "ಮಾಜಿ ಸೈನಿಕ" "ಸಶಸ್ತ್ರ ದಳದ ಸದಸ್ಯ" ಮತ್ತು "ಕುಟುಂಬದ ಸದಸ್ಯ"*** ಎಂಬ ಪದಗಳ ಅರ್ಥವು ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ [ಸಾಮಾನ್ಯ ನೇಮಕಾತಿ] ನಿಯಮಗಳು–1977ರಲ್ಲಿ ವಿವರಿಸಿರುವಂತೆ ಇರುತ್ತದೆ.

### *13 ] ಅಂಗವಿಕಲ ಅಭ್ಯರ್ಥಿಗಳು:*

ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಎಂಎಂಡಬ್ಲ್ಯೂ:107:ಪಿಹೆಚ್‌ಪಿ:2003, ದಿ:11.07.2003 ಮತ್ತು ಸಂಖ್ಯೆ:ಡಿಪಿಎಆರ್:50:ಎಸ್‌ಆರ್‌ಆರ್:2000 ದಿ:30.09.2005ರ ಅನ್ವಯ ತಾನು "ಅಂಗವಿಕಲರ ಗುಂಪಿಗೆ ಸೇರಿದವರೆಂದು ಹೇಳಿಕೊಳ್ಳುವ ಅಭ್ಯರ್ಥಿಯು" ವೈದ್ಯಕೀಯ ಪ್ರಮಾಣ ಪತ್ರವನ್ನು ಹೊಂದಿರಬೇಕು. ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್:ಸಿಆಸು:50:ಎಸ್‌ಆರ್‌ಆರ್:2007, ದಿ:26.07.2011ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ:ಎಂ.ಎ.ಇ:107:ಪಿಹೆಚ್‌ಪಿ:2003 ದಿ:11.07.2003ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಕ್ಷಮ ಜಿಲ್ಲಾ ವೈದ್ಯಕೀಯ ಮಂಡಳಿಯಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:50:ಎಸ್‌ಆರ್‌ಆರ್:2007, ದಿ:26.07.2011ರಲ್ಲಿ ಹಾಗೂ ಸಂಖ್ಯೆ:ಸಿಆಸುಇ:54:ಎಸ್‌ಆರ್‌ಆರ್:2012 ದಿ: 04.08.2012 ರಲ್ಲಿ ರಾಜ್ಯ ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ. ಸದರಿ ಅಧಿಸೂಚನೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತ ಭಾಗವನ್ನು ಈ ಕೆಳಗೆ ನೀಡಲಾಗಿದೆ.

| Blind | Low Vision | Leprosy Cured | Hearing Impaired | Locomotors Disability | Mentally ill | Mentally Retarded |
|---|---|---|---|---|---|---|
| Primary School Music Teacher, Asst Masters (general) (English) (Hindi)<br><br>Secondary School Assistant Grade-II, Assistant Masters [Arts] [Languages] Special Teacher Grade-II, Drama Teachers, Dance Teachers, Music Teachers.<br><br>FDA., SDA., | Primary School Music Teacher, Asst.Masters [General] [English] [Hindi]<br><br>Secondary School Assistant Grade-II, Assistant Masters [Arts] [Languages] Special Teacher Grade-II, Drama Teachers, Dance Teachers, Music Teachers.<br><br>FDA., SDA., Group D, Posts, Peon. | Primary School Assistant Masters [General] [Science] [English] [Hindi] Drawing Teacher<br><br>Secondary School Assistant Grade-II, Assistant Masters [Arts] [Physical Science] [Biological Science] [Languages]<br><br>Special Teacher Grade-II, Drawing Teachers, Drama Teachers, Dance Teachers, Craft Teachers, Music Teachers. | Primary School Music Teacher, Asst.Masters [General] [English] [Hindi] Drawing Teachers.<br><br>Secondary School Assistant Grade-II, Assistant Masters [Languages] Physical Education Teacher, Grade-II, Drawing Teachers, Drama Teachers, Dance Teachers, Craft Teachers.<br><br>FDA., SDA., Typist, & Group D., | Primary School Assistant Masters [General] [Science] [English] [Hindi] Drawing Teacher<br><br>Secondary School Assistant Grade-II, Assistant Masters [Arts] [Physical Science] [Biological Science] [Languages]<br><br>Special Teacher Grade-II, Drawing Teachers, Drama Teachers, Dance Teachers, Craft Teachers, Music Teachers. | FDA., SDA., & Group D Posts. | - |

| | | | | | | |
|---|---|---|---|---|---|---|
| | | FDA., SDA., Typist, Steno & Group D., | | FDA., SDA., Typist, Steno & Group D Posts. | | |

- ದೈಹಿಕ ಅಂಗವಿಕಲ ಅಭ್ಯರ್ಥಿಗಳು ಸರ್ಕಾರಿ ಜಿಲ್ಲಾ ಆಸ್ಪತ್ರೆಗಳಲ್ಲಿರುವ ಮೂಳೆ ತಜ್ಞ [Orthopaedic Surgeon] ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು Alimco Kanpur [W.H.O Standard] ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ. ಹಾಗೂ ಶ್ರವಣ ದೋಷ ಹೊಂದಿರುವ ಅಂಗವಿಕಲ ಅಭ್ಯರ್ಥಿಗಳ ಪ್ರಮಾಣ ಪತ್ರದಲ್ಲಿ ಶ್ರವಣ ದೋಷದ ಪ್ರಮಾಣವನ್ನು ಡೆಸಿಬಲ್ಸ್ [Decibels] ಗಳಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

**ಅಂಧ ಮತ್ತು ಮಂದ ದೃಷ್ಟಿಯ ಅಭ್ಯರ್ಥಿಗಳಿಗೆ ಈ ಕೆಳಗಿನವರು ಮಾತ್ರ ಅರ್ಹತೆ ಹೊಂದಿರುತ್ತಾರೆ.**

## VISUAL DISABILITY

I Definition : Blindness refers to a condition where a person suffers from any of the condition , namely

i) total absence of sight: or
ii) visual acuity not exceeding 6/60 of 20/200 (snellen) in the better eye with best correcting lenses: or
iii) Limitation of field of vision subtending an angle of 20 degree or worse :

2. **Low Vision**: Persons with low vision means a person with a impairment of vision of less than 6/18 to 6/60 with best correction in the better eye of impairment of field in anyone of the following categories:-

a) reduction of fields less than 50 degrees
b) Heminaopia with macular involvement
c) Altitudinal defect involving lower fields.

3. Categories of Visual Disability All with Correction

| Category | Better Eye | Worse eye | % age impairment |
|---|---|---|---|
| Category 0 | 6/9-6/18 | 6/24 to 6/36 | 20% |
| Category I | 6/18-6/36 | 6/60 to Nil | 40% |
| Category II | 6/40-4/60 Or Field Of vision 10*-20* | 3/60 to Nil | 75% |
| Category III | 3/60 to 1/60 or Field Of vision 10* | F:C at 1 ft to Nil | 100% |
| Category IV | F:C at 1 ft to Nil or Field Of vision 10* | F:C at 1 ft to Nil | 100% |
| One Eyed Persons | 6/6 | F:C at 1 ft to Nil or Field Of vision 10* | 30% |

Note: F:C Means Finger Count

### *14 ] ಗ್ರಾಮೀಣ ಅಭ್ಯರ್ಥಿಗಳು:*

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ–1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964ರಡಿಯಲ್ಲಿ ನಿರ್ಧಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನು ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್:96:ಸೇನೆನಿ:2005, ದಿನಾಂಕ:10.08.2005ರಲ್ಲಿ ನೀಡಿರುವ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.

- ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1ರಲ್ಲಿ ಅಂದರೆ, ಮೇಲುಸ್ಥರದಲ್ಲಿ [creamy layer] ಬರುವುದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ ದಿನಾಂಕ:10.08.2005ರಲ್ಲಿ ನಿಗದಿಪಡಿಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
- ಪ್ರವರ್ಗ–1, 2.ಎ., 2.ಬಿ., 3.ಎ., 3.ಬಿ., ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ

ದಿನಾಂಕ:10.08.2005ರಲ್ಲಿ ನಿಗದಿ ಪಡಿಸಲಾದ ನಮೂನೆ-2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದಿರಬೇಕು.

### *15 ] ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿಗಳು:*

ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:23:ಎಸ್‌ಆರ್‌ಆರ್:1999, ದಿನಾಂಕ:23.11.2000ರನ್ವಯ ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿ ಮೀಸಲಾತಿ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ:44:ಸೇನೇನಿ, ದಿನಾಂಕ:27.07.2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ [ತಹಸೀಲ್ದಾರ್] ಅರ್ಜಿ ಸಲ್ಲಿಸುವ ಕೊನೆ ದಿನಾಂದೊಳಗೆ ಪಡೆದಿರಬೇಕು.

### *ಯೋಜನೆ ಅಂದರೆ:*

ನಿರಾಶ್ರಿತ ವ್ಯಕ್ತಿಗಳಿಂದ ಪಡೆಯಲಾದ ಜಮೀನನ್ನು ನಿರ್ಮಾಣ ಅಥವಾ ನೀರಾವರಿಯ ಉದ್ದೇಶಕ್ಕಾಗಿ ಅಥವಾ ನೀರು ಸರಬರಾಜು ಮಾಡುವ ಅಭಿವೃದ್ಧಿ ಕಾರ್ಯದ ವಿಸ್ತರಣೆ ಅಥವಾ ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ಪೂರೈಕೆ ಅಥವಾ ವಿದ್ಯುಚ್ಛಕ್ತಿ ಕಾರ್ಯಗಳ ಅನುಕೂಲಕರ ಅಭಿವೃದ್ಧಿಯೂ ಸೇರಿದಂತೆ ಸಾರ್ವಜನಿಕ ಉಪಯೋಗಗಳಿಗಾಗಿ ನಿರ್ಮಾಣ ಸುಧಾರಣೆ ಅಥವಾ ಅಭಿವೃದ್ಧಿ ಕಾರ್ಯಗಳ ಯೋಜನೆ.

### *ವಿಶೇಷ ಸೂಚನೆ:*

ಈ ಮೇಲ್ಕಂಡ ನಿಯಮಗಳು ಪ್ರಾರಂಭವಾಗುವುದಕ್ಕಿಂತ 20 ವರ್ಷಗಳ ಮುಂಚಿತವಾಗಿ ಯಾವುದೇ ಗ್ರಾಮೀಣದಲ್ಲಿನ ಅಥವಾ ಪ್ಲಾಟ್ ಅಥವಾ ಇನ್ನಿತರ ಯಾವುದೇ ಆಸ್ತಿಗಳನ್ನು ಹೊಂದಿದ್ದು, ಅಂತಹ ಅಸ್ತಿಗಳನ್ನು ಯೋಜನೆಗಳ ಉದ್ದೇಶಕ್ಕಾಗಿ ಉಪಯೋಗಿಸಿಕೊಂಡಿದ್ದಲ್ಲಿ, ಅಂತಹ ಜಮೀನುಗಳನ್ನು ಸ್ವಾಧೀನಪಡಿಸಿಕೊಂಡ ಕಾರಣದಿಂದಾಗಿ ನಿರಾಶ್ರಿತರಾದ ಕುಟುಂಬದ ಸದಸ್ಯರು / ವ್ಯಕ್ತಿಗಳು ಈ ನಿಯಮಗಳಿಗೆ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.

ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ:44: ಸೇನೇನಿ ದಿನಾಂಕ:27.07.2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

### *16 ] ಕನ್ನಡ ಮಾಧ್ಯಮದ ಅಭ್ಯರ್ಥಿಗಳು:*

1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳೂ ಈ ಮೀಸಲಾತಿಗೆ ಅರ್ಹರಾಗುತ್ತಾರೆ. [1ನೇ ತರಗತಿಗೆ ದಾಖಲಾಗದೇ ನೇರವಾಗಿ ನಂತರದ ಹೆಚ್ಚಿನ ತರಗತಿಗೆ ದಾಖಲಾಗಿ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಸಹ ಈ ಸೌಲಭ್ಯಕ್ಕೆ ಅರ್ಹರಾಗುವರು] ಈ ಅಭ್ಯರ್ಥಿಗಳು ಸಂಬಂಧಿಸಿದ ಮುಖ್ಯೋಪಾಧ್ಯಾಯರಿಂದ ದೃಢೀಕೃತ ಪ್ರಮಾಣ ಪತ್ರಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳವರ ಮೇಲುಸಹಿಯೊಂದಿಗೆ ಸಲ್ಲಿಸತಕ್ಕದ್ದು. ಪ್ರಮಾಣ ಪತ್ರಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳವರ ಮೇಲು ಸಹಿಯೊಂದಿಗೆ ಸಲ್ಲಿಸತಕ್ಕದ್ದು. ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

### *17 ] ಗೌರವ ಶಿಕ್ಷಕರ ಪ್ರಮಾಣ ಪತ್ರ:*

ಸರ್ಕಾರಿ ಶಾಲೆಗಳಲ್ಲಿ ಗೌರವ ಶಿಕ್ಷಕರಾಗಿ ಸಲ್ಲಿಸಿದ ಸೇವಾ ಅವಧಿಗೆ ಕೃಪಾಂಕ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ಶಾಲೆಯ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಆಯಾ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರಿಂದ ದೃಡೀಕರಿಸಿಕೊಂಡಿರಬೇಕು. ಸದರಿ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

### *18 ] ಅಭ್ಯರ್ಥಿಗಳ ಮಾಹಿತಿ ಸಂಬಂಧ ಆಕ್ಷೇಪಣೆ ಸ್ವೀಕರಿಸಿ ದಾಖಲಿಸುವುದು:*

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳು, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳು ಹಾಗೂ ಅಭ್ಯರ್ಥಿಯು ಅರ್ಜಿಯಲ್ಲಿ ಕ್ಲೇಮು ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ಎಲ್ಲಾ ಅಭ್ಯರ್ಥಿಗಳ ವಿವರಗಳನ್ನು ಅಂದರೆ, ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳು, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳು ಹಾಗೂ ಆನ್‌ಲೈನ್ ಅರ್ಜಿಯಲ್ಲಿ ಕ್ಲೇಮು ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖಾ

***17 ] ಗೌರವ ಶಿಕ್ಷಕರ ಪ್ರಮಾಣ ಪತ್ರ:***

ಸರ್ಕಾರಿ ಶಾಲೆಗಳಲ್ಲಿ ಗೌರವ ಶಿಕ್ಷಕರಾಗಿ ಸಲ್ಲಿಸಿದ ಸೇವಾ ಅವಧಿಗೆ ಕೃಪಾಂಕ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ಶಾಲೆಯ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಆಯಾ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರಿಂದ ದೃಡೀಕರಿಸಿಕೊಂಡಿರಬೇಕು. ಸದರಿ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

***18 ] ಅಭ್ಯರ್ಥಿಗಳ ಮಾಹಿತಿ ಸಂಬಂಧ ಆಕ್ಷೇಪಣೆ ಸ್ವೀಕರಿಸಿ ದಾಖಲಿಸುವುದು:***

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳು, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳು ಹಾಗೂ ಅಭ್ಯರ್ಥಿಯು ಅರ್ಜಿಯಲ್ಲಿ ಕ್ಲೇಮು ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ಎಲ್ಲಾ ಅಭ್ಯರ್ಥಿಗಳ ವಿವರಗಳನ್ನು ಅಂದರೆ, ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳು, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳು ಹಾಗೂ ಆನ್‌ಲೈನ್ ಅರ್ಜಿಯಲ್ಲಿ ಕ್ಲೇಮು ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖಾ ವೆಬ್‌ಸೈಟ್ http://schooleducation.kar.nic.in ನಲ್ಲಿ ಪ್ರಕಟಿಸಿ, ನಿಗದಿತ ಸಮಯ ನೀಡಿ ಆಕ್ಷೇಪಣೆಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗುವುದು. ಅಭ್ಯರ್ಥಿಯು ಆನ್‌ಲೈನ್ ಮೂಲಕ ಸಲ್ಲಿಸಿರುವ ಅರ್ಜಿಯಲ್ಲಿ ದಾಖಲಿಸಿದ ಶೈಕ್ಷಣಿಕ ಮಾಹಿತಿಯಲ್ಲಿ ವ್ಯತ್ಯಾಸವಾಗಿದ್ದಲ್ಲಿ ಮಾತ್ರ ನಿಗದಿತ ನಮೂನೆಯಲ್ಲಿ ಆಕ್ಷೇಪಣೆಗಳನ್ನು ಸಲ್ಲಿಸಬೇಕಾಗುತ್ತದೆ. ಆದರೆ, ಮೂಲ ಅರ್ಜಿಯಲ್ಲಿ ದಾಖಲಿಸದಿರುವ ಯಾವುದೇ ಮಾಹಿತಿಯನ್ನು ಪರಿಗಣಿಸಲಾಗುವುದಿಲ್ಲ. ಆಕ್ಷೇಪಣೆಗಳನ್ನು ನಿಯಮಾನುಸಾರ ಪರಿಶೀಲಿಸಿ, ಅಭ್ಯರ್ಥಿಗಳು ನೀಡಿದ ಶೈಕ್ಷಣಿಕ ದಾಖಲೆಗಳ ಆಧಾರದ ಮೇಲೆ ಪರಿಷ್ಕರಿಸಿ, ಪುನಃ ಇಲಾಖಾ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.

***19 ] ಆಯ್ಕೆ ಪಟ್ಟಿ ತಯಾರಿಸುವ ವಿಧಾನ:***

ಆಯ್ಕೆ ಪಟ್ಟಿಯನ್ನು ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ತಯಾರಿಸಲಾಗುತ್ತದೆ. ಅರ್ಹತೆ ಮತ್ತು ಮೀಸಲಾತಿ ಬಗ್ಗೆ ವಿವರಗಳನ್ನು ಈಗಾಗಲೇ ನೀಡಿದೆ. ಆಯ್ಕೆ ಪಟ್ಟಿಯನ್ನು ಎರಡು ಹಂತಗಳಲ್ಲಿ ತಯಾರಿಸಲಾಗುತ್ತದೆ.

- ***ಮೊದಲ ಹಂತ:*** ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆಗಳ ಆಹ್ವಾನ.
- ***ಎರಡನೇ ಹಂತ:*** ಮೂಲ ಪ್ರಮಾಣ ಪತ್ರಗಳ ಪರಿಶೀಲನೆ ಮತ್ತು ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆ.

***ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆಗಳ ಆಹ್ವಾನ:***

ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿ ಅಭ್ಯರ್ಥಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗುತ್ತದೆ. ಆಕ್ಷೇಪಣೆಗಳನ್ನು ಸಲ್ಲಿಸಲು ಅಂತಿಮ ದಿನಾಂಕವನ್ನು ನಿಗದಿಪಡಿಸಲಾಗುತ್ತದೆ. ಈ ಬಗ್ಗೆ ಸೂಚನೆಯನ್ನು ದಿನಪತ್ರಿಕೆಗಳಲ್ಲಿ ನೀಡಲಾಗುತ್ತದೆ. ಅಭ್ಯರ್ಥಿಗಳು ತಮ್ಮ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ ಹಾಗೂ ಈ ಬಗ್ಗೆ ಯಾವುದೇ ಸೂಚನೆ ನೀಡಿರುವುದಿಲ್ಲ. ಇದೇ ರೀತಿ ಯಾವುದೇ ಅಭ್ಯರ್ಥಿ ಆಕ್ಷೇಪಣೆಗಳನ್ನು ಸಲ್ಲಿಸದಿದ್ದಲ್ಲಿ ಅಂತಿಮ ಆಯ್ಕೆ ಪಟ್ಟಿಯಲ್ಲಿ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹತೆ ಪಡೆಯುವುದಿಲ್ಲ. ಹಾಗೂ ಅಂತಿಮ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಮತ್ತೆ ಅವರ ಅರ್ಹತೆಯ ಪರಿಶೀಲನೆಗಾಗಲೀ ಅಥವಾ ಇನ್ನಾವುದೇ ಬಗೆಯ ಪರಿಹಾರಕ್ಕಾಗಲೀ ಅರ್ಹತೆ ಪಡೆಯುವುದಿಲ್ಲ.

***20 ] ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆ:***

- ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದಾಗ ಪ್ರತಿ ಅಭ್ಯರ್ಥಿ ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸಬೇಕೆಂದು ಪ್ರಕಟಣೆಯಲ್ಲಿ ತಿಳಿಸಲಾಗಿರುತ್ತದೆ. ಇದರಂತೆ ಅಭ್ಯರ್ಥಿಗಳು ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕೃತಿ ಮತ್ತು ಗುರುತಿನ ಪತ್ರದ ಪ್ರತಿ ಸಹಿತ ಪರಿಶೀಲನೆಗೆ ಸಲ್ಲಿಸಬೇಕು. ***ಅಭ್ಯರ್ಥಿಗಳಿಗೆ ಈ ಬಗ್ಗೆ ವೈಯಕ್ತಿಕವಾಗಿ ಸೂಚನೆ ನೀಡಲಾಗುವುದಿಲ್ಲ.*** ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಸಲ್ಲಿಸದಿರುವ / ಕೌನ್ಸಿಲಿಂಗ್ ಗೈರು ಹಾಜರಾಗುವ / ಅಪೂರ್ಣ ದಾಖಲೆಗಳನ್ನು ಅಭ್ಯರ್ಥಿಗಳು ಅಂತಿಮ ಆಯ್ಕೆಪಟ್ಟಿಯಲ್ಲಿ ಅವಕಾಶವನ್ನು ಕಳೆದುಕೊಳ್ಳುತ್ತಾರೆ.
- ಜಿಲ್ಲಾ ಮಟ್ಟದ ಅಂತಿಮ ಆಯ್ಕೆಪಟ್ಟಿಯಿಂದ ಬ್ಲಾಕ್ ಮಟ್ಟದ ಆಯ್ಕೆಪಟ್ಟಿಯನ್ನು ಅಭ್ಯರ್ಥಿಗಳು ಅರ್ಜಿಯಲ್ಲಿ ಸೂಚಿಸಿರುವ ಬ್ಲಾಕ್‌ಗಳ ಆದ್ಯತೆಯ ಆಧಾರದ ಮೇಲೆ ತಯಾರಿಸಲಾಗುತ್ತದೆ. ಅಭ್ಯರ್ಥಿಗಳು ಅರ್ಜಿಯಲ್ಲಿ ಬ್ಲಾಕ್‌ಗಳ ಆದ್ಯತೆಯನ್ನು ಸರಿಯಾಗಿ ನಮೂದಿಸಬೇಕು.
- ಬ್ಲಾಕ್ ಮಟ್ಟದ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಪ್ರಾಧಿಕಾರಿಗಳಾದ ಕ್ಷೇತ್ರ ಶಿಕ್ಷಣಾಧಿಕಾರಿಗಳು ಕೌನ್ಸಿಲಿಂಗ್ ಮೂಲಕ ನೇಮಕಾತಿ ಆದೇಶ ನೀಡುತ್ತಾರೆ.

## 21 ] ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ವಿವರಗಳು:

***ಅ. ಪರೀಕ್ಷೆಯ ಹೆಸರು:*** ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿಯರ ಹುದ್ದೆಗಳ ನೇಮಕಾತಿಗೆ ನಡೆಸುವ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಪ್ರತಿಯೊಂದಿಗೆ ಅಭ್ಯರ್ಥಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾಗುವುದು ಕಡ್ಡಾಯವಾಗಿರುತ್ತದೆ.

***ಆ. ಪರೀಕ್ಷೆ ನಡೆಸುವ ಪ್ರಾಧಿಕಾರ:*** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಆಯ್ಕೆ ಪ್ರಾಧಿಕಾರ ಹಾಗೂ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ತಮ್ಮ ಶೈಕ್ಷಣಿಕ ಜಿಲ್ಲೆಯ ವ್ಯಾಪ್ತಿಯಲ್ಲಿ ನಡೆಸುವರು.

**ಇ.** ಪರೀಕ್ಷೆ ನಡೆಸುವ ದಿನಾಂಕ : 23-05-2015 ಮತ್ತು 24-05-2015

***ಈ. ಪರೀಕ್ಷಾ ಅವದಿ ಹಾಗೂ ಸಮಯ:***

**ದಿ:23-05-2015** ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 01.00 ಗಂಟೆ. ***( 1-***5ನೇ ತರಗತಿ ಶಿಕ್ಷಕರಿಗೆ),

**ದಿ:23-05-2015** ಮಧ್ಯಾಹ್ನ 2.30 ರಿಂದ 05.00 ಗಂಟೆ.***(6-8*** ನೇ ತರಗತಿಗೆ ಪೇಪರ್-1)

**ದಿ:24-05-2015** ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 01.00 ಗಂಟೆ ***(6-8*** ನೇ ತರಗತಿಗೆ ಪೇಪರ್-2 ಸಾಮಾನ್ಯ ಹುದ್ದೆಗೆ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳಿಗೆ

**ದಿ:24-05-2015** ಮಧ್ಯಾಹ್ನ 2.30 ರಿಂದ 05.00 ಗಂಟೆ. ***(6-8*** ನೇ ತರಗತಿಗೆ ಪೇಪರ್-2) ಆಂಗ್ಲ ಭಾಷಾ ಹುದ್ದೆಗೆ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳಿಗೆ

**ಸೂಚನೆ:6-8ನೇ ತರಗತಿ ಶಿಕ್ಷಕರ ಹುದ್ದಗೆ ಅರ್ಜಿಸಲ್ಲಿಸಿರುವರು ಪೇಪರ್-1 ಮತ್ತು ಪೇಪರ್-2 ಎರಡಕ್ಕೂ ಕಡ್ಡಾಯವಾಗಿ ಹಾಜರಾಗಬೇಕು.**

***ಉ. ಪ್ರಶ್ನೆ ಪತ್ರಿಕೆಯಲ್ಲಿನ ವಿಷಯ ಹಾಗೂ ಅಂಕಗಳು :*** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಪ್ರತಿ ಪತ್ರಿಕೆಗೆ ಕೋಷ್ಠಕದಲ್ಲಿ ಸೂಚಿಸಿರುವಂತೆ ಒಟ್ಟು 150 ಅಂಕಗಳನ್ನು ನಿಗದಿಪಡಿಸಲಾಗಿದೆ. ಪ್ರಸ್ತುತ ನಡೆಯುತ್ತಿರುವ ಪರೀಕ್ಷೆ ಎನ್.ಸಿ.ಟಿ.ಇ., ನಿಗದಿ ಪಡಿಸಿರುವ ವಿದ್ಯಾರ್ಹತೆ, ಶಿಕ್ಷಕರ ಅರ್ಹತಾ ಪರೀಕ್ಷೆ ಸ್ವರೂಪವನ್ನು ಅನುಸರಿಸಿ ನಡೆಸಲಾಗುವುದು.

***ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ ಕೆಳಗಿನಂತಿದೆ.(1-5ನೇ ತರಗತಿ)***

| ಕ್ರ.ಸಂ | ವಿಷಯ | ಅಂಕಗಳು |
|---|---|---|
| 01. | ಸಾಮಾನ್ಯ ಜ್ಞಾನ(ಪ್ರಚಲಿತ ವಿದ್ಯಾಮಾನಗಳು) | 15 |
| 02. | ಶಿಶು ಮನೋವಿಜ್ಞಾನ ಮತ್ತು ವಿಕಸನ. ಬೋದನಾ ಸಾಮರ್ಥ್ಯ | 25 |
| 03. | ಬಾಷೆ: ಕನ್ನಡ / ಉರ್ದು/ಮರಾಠಿ /ತಮಿಳು /ತೆಲಗು | 20 |
| 04. | ಸಾಮಾನ್ಯ ಆಂಗ್ಲ ಭಾಷೆ | 25 |
| 05. | ಪರಿಸರ ಅಧ್ಯಯನ [ವಿಜ್ಞಾನ ಮತ್ತು ಸಮಾಜ ವಿಜ್ಞಾನ] | 20 |
| 06 | ಗಣಿತ | 20 |
| 07 | ಗಣಕ ಯಂತ್ರ ಪ್ರಬುದ್ಧತೆ ಬಗ್ಗೆ | 25 |
| | ಒಟ್ಟು | 150 |

***ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ (6-8ನೇ ತರಗತಿ) ಪೇಪರ್-1***

| ಕ್ರ.ಸಂ | ವಿಷಯ | ಅಂಕಗಳು |
|---|---|---|
| 01. | ಸಾಮಾನ್ಯ ಜ್ಞಾನ(ಪ್ರಚಲಿತ ವಿದ್ಯಾಮಾನಗಳು) | 30 |
| 02. | ಶೈಕ್ಷಣಿಕ ಮನೋವಿಜ್ಞಾನ ಮತ್ತು ವಿಕಸನ. | 40 |
| 03. | ಸಾಮಾನ್ಯ ಆಂಗ್ಲ ಭಾಷೆ | 25 |
| 04. | ಮೌಲ್ಯಶಿಕ್ಷಣ ಮತ್ತು ಆರೋಗ್ಯ ಶಿಕ್ಷಣ | 30 |
| 05. | ಗಣಕ ಯಂತ್ರ ಪ್ರಬುದ್ದತೆ ಬಗ್ಗೆ | 25 |
| | ಒಟ್ಟು | 150 |

***ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ (6-8ನೇ ತರಗತಿ) ಪೇಪರ್-2***

***ಕನ್ನಡ /ಉರ್ದು/ಮರಾಠಿ/ತೆಲುಗು/ತೆಮಿಳ್ ಸಾಮಾನ್ಯ ಶಿಕ್ಷಕರಿಗೆ ಮಾತ್ರ***

| ಕ್ರ.ಸಂ | ವಿಷಯ | ಅಂಕಗಳು |
|---|---|---|
| 01. | ಆಯಾ ಭಾಷೆ ಮತ್ತು ಬೋಧನಾ ಸಾಮರ್ಥ್ಯ | 75 |
| 02. | ಸಮಾಜ ವಿಜ್ಞಾನ , ವಿಷಯ ಜ್ಞಾನ ಮತ್ತು ಬೋಧನಾ ಸಾಮರ್ಥ್ಯ | 75 |
| | ಒಟ್ಟು | 150 |

***ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ (6–8ನೇ ತರಗತಿ) ಪೇಪರ್–2***

***ಆಂಗ್ಲ ಭಾಷಾ ಶಿಕ್ಷಕರಿಗೆ ಮಾತ್ರ***

| ಕ್ರ.ಸಂ | ವಿಷಯ | ಅಂಕಗಳು |
|---|---|---|
| 01. | ಆಂಗ್ಲ ಭಾಷೆ –ವಿಷಯ ಜ್ಞಾನ | 100 |
| 02. | ಆಂಗ್ಲ ಭಾಷೆ ಬೋಧನಾ ಸಾಮರ್ಥ್ಯ | 50 |
| | ಒಟ್ಟು | 150 |

***22 ] ಪರೀಕ್ಷಾ ವಿಷಯುಗಳಿಗೆ ನಿಗದಿಪಡಿಸಿರುವ ಪಠ್ಯವಸ್ತು: [ಎನ್.ಸಿ.ಟಿ.ಇ., ನಿಗಧಿಪಡಿಸಿರುವ ಪರೀಕ್ಷಾ ಪಠ್ಯ ಕ್ರಮದಂತೆ]***

*01.* ಭಾಷೆ : ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು.

*02.* ಆಂಗ್ಲ ಭಾಷೆ, [4] ಪರಿಸರ ಅಧ್ಯಯನ [ವಿಜ್ಞಾನ ಮತ್ತು ಸಮಾಜ ವಿಜ್ಞಾನ] [5] ಗಣಿತ.

*03.* ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ.

***ಅ.*** ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿ ಬರುತ್ತದೆ.
***1–***5ನೇ ತರಗತಿ ಪಿ,ಯು,ಸಿ ಮಟ್ಟದ ಜ್ಞಾನ ಹಾಗೂ ***6–8*** ನೇ ತರಗತಿ ಪದವಿ ಮಟ್ಟದ ಜ್ಞಾನ

***ಆ.*** ಪ್ರಶ್ನಗಳು ವಸ್ತುನಿಷ್ಠವಾಗಿದ್ದು ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.

***ಇ.*** ಪ್ರತಿ ಪ್ರಶ್ನೆ ನಾಲ್ಕು ಉತ್ತರಗಳನ್ನು ಹೊಂದಿದ್ದು, ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.

***ಈ.*** ಉತ್ತರಗಳನ್ನು 'ಓ.ಎಂ.ಆರ್' ಶೀಟಿನಲ್ಲಿ ಗುರುತಿಸುವುದು.

***ಉ.*** ಪ್ರಶ್ನೆ ಪತ್ರಿಕೆಗಳು ಆಯಾ ಭಾಷೆಯನ್ನು ಹೊರತುಪಡಿಸಿ ಉಳಿದ ವಿಷಯಗಳು ಕನ್ನಡ ಮತ್ತು ಆಂಗ್ಲ ಭಾಷೆಗಳಲ್ಲಿ ಇರುತ್ತದೆ.

***23 ] ಪ್ರಮುಖವಾದ ಸೂಚನೆಗಳು:***

***01.*** ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿ ಸಲ್ಲಿಸದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ಆಯ್ಕೆಗೆ ಪರಿಗಣಿಸುವುದಿಲ್ಲ. ಅಭ್ಯರ್ಥಿಗಳು ಪ್ರವೇಶ ಪತ್ರವನ್ನು ಆನ್‌ಲೈನ್ ಮೂಲಕವೇ ಪಡೆಯತಕ್ಕದ್ದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಹಾಜರಾದ ಮಾತ್ರಕ್ಕೆ ಅಭ್ಯರ್ಥಿ ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಭ್ಯರ್ಥಿಯು ಇದರ ಜೊತೆಗೆ ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿ ಹೊಂದಿರತಕ್ಕದ್ದು.

***02.*** ಅರ್ಜಿಗಳನ್ನು ದಿನಾಂಕ: 27–04–2015ರೊಳಗೆ ಆನ್‌ಲೈನ್ ಮೂಲಕವೇ ಸಲ್ಲಿಸಬೇಕು. ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ. ಅಂಚೆ ಮೂಲಕ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

***03.*** ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಸಮಯಕ್ಕೆ ***ಎಲ್ಲಾ ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದ ಮೊದಲೇ ಪಡೆದಿರಬೇಕು.*** ಆದರೆ, ತಾತ್ಕಾಲಿಕ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಆಯ್ಕೆ ಹೊಂದಿದ್ದಲ್ಲಿ ಅಥವಾ ಆಕ್ಷೇಪಣೆ ನೀಡುವ ಹಂತದಲ್ಲಿ ಎಲ್ಲಾ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಆಯ್ಕೆ ಪ್ರಾಧಿಕಾರಕ್ಕೆ ಸಲ್ಲಿಸಬೇಕು.

***04.*** ಅಭ್ಯರ್ಥಿಗಳು ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ ಭಾವಚಿತ್ರವನ್ನು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿ ನಮೂನೆಯಲ್ಲಿ ನಿಗದಿಪಡಿಸಿರುವ ಸ್ಥಳದಲ್ಲಿಯೇ ಸ್ಕ್ಯಾನ್ ಮಾಡಿ ಸಲ್ಲಿಸುವುದು.

***05.*** ಪ್ರಮಾಣ ಪತ್ರಗಳು ಪರಿಶೀಲನೆಯ ಸಮಯದಲ್ಲಿ ***ಸುಳ್ಳು ದಾಖಲೆ ಅಥವಾ ಸುಳ್ಳು ಮಾಹಿತಿ ನೀಡಿರುವುದು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಯಾಗುವ ಅವಕಾಶವನ್ನು ಕಳೆದುಕೊಳ್ಳುತ್ತಾರೆ.***

***06.*** ಆಯ್ಕೆಪಟ್ಟಿಯಲ್ಲಿ ಸೇರ್ಪಡೆಯಾದ ಮಾತ್ರಕ್ಕೆ ಅಭ್ಯರ್ಥಿಗಳ ನೇಮಕಾತಿಗೆ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.

***07.*** ಮೇಲಿನ ನೇಮಕಾತಿಗಳು ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

***08.*** ಯಾವುದೇ ಹಂತದಲ್ಲಿ ತಪ್ಪು ಮಾಹಿತಿಯ ಆಧಾರದ ಮೇಲೆ ಆಯ್ಕೆಯಾದ ಅಥವಾ ಅನರ್ಹತೆಯ ಕಾರಣಗಳಿಗಾಗಿ ಅಭ್ಯರ್ಥಿಯ ಹೆಸರನ್ನು ಪಟ್ಟಿಯಿಂದ ಕೈಬಿಡುವ ಅಥವಾ ನೇಮಕಾತಿ ಆದೇಶವನ್ನು ರದ್ದುಗೊಳಿಸುವ ಅಧಿಕಾರವನ್ನು ಇಲಾಖೆಯು ಕಾಯ್ದಿರಿಸಿಕೊಂಡಿರುತ್ತದೆ.

***09.*** ಆಯ್ಕೆಯಾದ ಅಭ್ಯರ್ಥಿಯು ತಾನು ನೇಮಕಗೊಂಡ ನೇಮಕಾತಿ/ಜೇಷ್ಠತಾ ಘಟಕ [ತಾಲ್ಲೂಕು]ದಲ್ಲಿ ಕನಿಷ್ಠ 10 ವರ್ಷಗಳ ಸೇವೆಯನ್ನು ಪೂರೈಸಿರಬೇಕು. ಇಲ್ಲವಾದಲ್ಲಿ ಘಟಕದ ಹೊರಗಿನ ವರ್ಗಾವಣೆಗೆ ಅವಕಾಶವಿರುವುದಿಲ್ಲ. ಈ ಷರತ್ತಿಗೆ ಬದ್ಧರಾಗಿವರು ಮಾತ್ರ ನೇಮಕಾತಿಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು .

***10.*** ಅಭ್ಯರ್ಥಿಗಳು ಅವರ ಅರ್ಜಿಗಳಲ್ಲಿ ಭರ್ತಿ ಮಾಡಿರುವ ಮಾಹಿತಿಗಳ ಆಧಾರದ ಮೇಲೆ ಅವರಿಗೆ ಸ್ಪರ್ಧಾತ್ಮಕ ಪರೀಕ್ಷೆ ಬರೆಯಲು ಪ್ರವೇಶ ಪತ್ರಗಳನ್ನು ನೀಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಅಂಕಗಳ ಮಾಹಿತಿ, ಮೀಸಲಾತಿ, ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದ ಅಥವಾ ತಪ್ಪು ಮಾಹಿತಿ ನೀಡಿದ ಸಂದರ್ಭಗಳಲ್ಲಿ ಮುಂದಿನ ಆಗುಹೋಗುಗಳಿಗೆ ಅಭ್ಯರ್ಥಿಗಳೇ ಜವಾಬ್ದಾರರು.

*11.* ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಹಾಗೂ ವಯೋಮಿತಿ ಸಡಿಲಿಕೆ ಇತ್ಯಾದಿಗಳಿಗೆ ಸಂಬಂಧಿತ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು. ಈ ಬಗ್ಗೆ ಅನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಮನವಿ ಪತ್ರಗಳನ್ನು ಪುರಸ್ಕರಿಸಲಾಗುವುದಿಲ್ಲ.

*12.* ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

*13.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವಾಗ ಪ್ರವೇಶ ಪತ್ರ, ಸ್ವೀಕೃತಿ ಪತ್ರ ಹಾಗೂ ಇತರೆ ದಾಖಲೆಗಳನ್ನು ಆಯ್ಕೆ ಪ್ರಕ್ರಿಯೆ ಮುಗಿಯುವ ತನಕ ಸುರಕ್ಷಿತವಾಗಿ ಇಟ್ಟುಕೊಳ್ಳತಕ್ಕದ್ದು. ಈ ಅರ್ಜಿಯನ್ನು ಭರ್ತಿ ಮಾಡುವ ವಿಧಾನ, ಮೀಸಲಾತಿ ಪ್ರಮಾಣ ಪತ್ರಗಳ ನಮೂನೆ, ಮೀಸಲಾತಿಯ [Horizontal and vertical Reservations] ವಿವರ ಹಾಗೂ ಸರ್ಕಾರಿ ಆದೇಶಗಳ ಬಗ್ಗೆ ಮಾಹಿತಿ ನೀಡಲಾಗಿದ್ದು, ಅಭ್ಯರ್ಥಿಗಳು ಅವುಗಳನ್ನು ಗಮನವಿಟ್ಟು ಓದಿಕೊಳ್ಳತಕ್ಕದ್ದು.

*14.* ದುರ್ನಡತೆ: ಒಬ್ಬ ಅಭ್ಯರ್ಥಿಯು ನಕಲು ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯ್ಕೆ ಪ್ರಾಧಿಕಾರದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದೇ ಅಲ್ಲದೇ, ಆಯ್ಕೆ ಪ್ರಾಧಿಕಾರವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

*15.* ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. [ಅರ್ಜಿಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ] ನಮೂದಿಸಲು ಬಿಟ್ಟುಹೋಗಿದ್ದ ಯಾವುದೇ ಮಾಹಿತಿಯನ್ನು ಹೊಸದಾಗಿ ದಾಖಲಿಸಲು ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೇ ತಿರಸ್ಕರಿಸಲಾಗುವುದು.

*16.* ಅರ್ಜಿ ನಮೂನೆ, ಉತ್ತರ ಪತ್ರಿಕೆ, ಪ್ರವೇಶ ಪತ್ರಗಳ ನಿಗದಿತ ಸ್ಥಳಗಳಲ್ಲಿ ಎಡಗೈ ಹೆಬ್ಬೆಟ್ಟು ಗುರುತನ್ನು ಸ್ಪಷ್ಟವಾಗಿ ಹಾಕಬೇಕು. ಎಡಗೈ ಹೆಬ್ಬೆರಳ ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.

*17.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ ಪ್ರವೇಶ ಪತ್ರದ ಪ್ರತಿಯನ್ನು ದ್ವಿಪ್ರತಿಯಲ್ಲಿ ಡೌನ್‌ಲೋಡ್ ಮಾಡಿಕೊಂಡು ಆ ಪ್ರತಿಗಳಲ್ಲಿ ಒಂದೇ ಮಾದರಿಯ ಇತ್ತೀಚಿನ ತಲಾ ಒಂದು ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು.

*18.* ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಈ ಸಂಬಂಧ ಆಯ್ಕೆ ಪ್ರಾಧಿಕಾರಿ / ನೇಮಕಾತಿ ಪ್ರಾಧಿಕಾರಿಗಳು ನೀಡುವ ಸೂಚನೆಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ನಲ್ಲಿ ಅವಲೋಕಿಸುವುದು.

*19.* ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗೆ ನಡೆಸಲಾಗುವ ಸ್ಪರ್ಧಾತ್ಮಕ ಪರೀಕ್ಷೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಕಡ್ಡಾಯವಾಗಿ 10ನೇ ತರಗತಿಯ ಪಠ್ಯದ ಆಂಗ್ಲ ಭಾಷೆಯ ಜ್ಞಾನ ಹಾಗೂ ಸಾಮಾನ್ಯ ಕಂಪೂಟರ್ ಜ್ಞಾನವನ್ನು ಫಂಡಮೆಂಟಲ್ಸ್, ಎಂ.ಎಸ್.ವಿನ್ಡೋಸ್, ಎಂ.ಎಸ್.ವರ್ಡ್, ಎಂ.ಎಸ್.ಎಕ್ಸ್‌ಲ್, ಫವರ್ ಪಾಯಿಂಟ್ ಬಗ್ಗೆ ಹೊಂದಿರತಕ್ಕದ್ದು.

ಹೆಚ್ಚಿನ ವಿವರಗಳಿಗೆ ಆನ್‌ಲೈನ್‌ನಲ್ಲಿ ನೀಡಿರುವ ಸೂಚನೆಗಳನ್ನು ಗಮನಿಸಬೇಕು. ಹಾಗೂ ಯಾವುದೇ ಹೆಚ್ಚಿನ ಸ್ಪಷ್ಟೀಕರಣಕ್ಕೆ ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರ ಕಛೇರಿಯನ್ನು ಸಂಪರ್ಕಿಸಬಹುದು.

**ಜಿ.ಎಲ್.ಬಾರಾಟಕ್ಕೆ**

*ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪನಿರ್ದೇಶಕರು,*

ಸಾರ್ವಜನಿಕ ಶಿಕ್ಷಣ ಇಲಾಖೆ, , *ಗದಗ ಜಿಲ್ಲೆ ಗದಗ*

**ಉಪನಿರ್ದೇಶಕರು ಹಾಗೂ ಆಯ್ಕೆ ಪ್ರಾಧಿಕಾರಿಗಳು ಸಾರ್ವಜನಿಕ ಶಿಕ್ಷಣ ಇಲಾಖೆ ಗದಗ**

**2014–15 ನೇ ಸಾಲಿನ 1–5ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಅಧಿಸೂಚಿಸಲಾದ ಖಾಲಿ ಹುದ್ದೆಗಳ ವರ್ಗೀಕರಣ**

**(ವಿಷಯ:–ಕನ್ನಡ ಸಾಮಾನ್ಯ)**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಮುಂಡರಗಿ | 0 | 8 | 8 | 1 | ಇತರೆ | 1 | | | | | | | 2 | 3 |
| | | | | | ಗ್ರಾಮೀಣ ಅ | | | | | 1 | | 1 | 1 | 3 |
| | | | | 3 | ಅಂಗವಿಕಲ | | | | | | | | | 0 |
| | | | | 4 | ಮಾಜಿ ಸೈನಿಕ | | | | 1 | | | | | 1 |
| | | | | 5 | ಕ.ಮಾ.ಅಭ್ಯರ್ಥಿ | | | | | | | | 1 | 1 |
| | | | | 6 | ಯೋ.ನಿರಾ.ಅ | | | | | | | | | 0 |
| | | | | | **ಒಟ್ಟು** | **1** | **0** | **0** | **1** | **1** | **0** | **1** | **4** | **8** |

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ರೋಣ | 0 | 4 | 4 | 1 | ಇತರೆ | | | | | | | | 2 | 2 |
| | | | | 2 | ಗ್ರಾಮೀಣ ಅ | 1 | | | | | | | | 1 |
| | | | | 3 | ಅಂಗವಿಕಲ | | | | | | | 1 | | 1 |
| | | | | 4 | ಮಾಜಿ ಸೈನಿಕ | | | | | | | | | 0 |
| | | | | 5 | ಕ.ಮಾ.ಅಭ್ಯರ್ಥಿ | | | | | | | | | 0 |
| | | | | 6 | ಯೋ.ನಿರಾ.ಅ | | | | | | | | | 0 |
| | | | | | **ಒಟ್ಟು** | **1** | **0** | **0** | **0** | **0** | **0** | **1** | **2** | **4** |

**ಮೇಲಿನ [*] ಸಾಮಾನ್ಯ ಗುಂಪಿನ ಅಂಗವಿಕಲ ಬಿಂಧು ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಶಿರಹಟ್ಟಿ | 0 | 8 | 8 | 1 | ಇತರೆ | | | | | | | | 3 | **3** |
| | | | | 2 | ಗ್ರಾಮೀಣ ಅ | | | | 1 | | | | 1 | **2** |
| | | | | 3 | ಅಂಗವಿಕಲ | | | | | 1 | | 1 | | **2** |
| | | | | 4 | ಮಾಜಿ ಸೈನಿಕ | | | | | | | | | **0** |
| | | | | 5 | ಕ.ಮಾ.ಅಭ್ಯರ್ಥಿ | 1 | | | | | | | | **1** |
| | | | | 6 | ಯೋ.ನಿರಾ.ಅ | | | | | | | | | **0** |
| | | | | | **ಒಟ್ಟು** | **1** | | | **1** | **1** | **0** | **1** | **4** | **8** |

**ಮೇಲಿನ [*] 2ಬಿ ಮತ್ತು 3ಬಿ, ಗುಂಪಿನ ಅಂಗವಿಕಲ ಬಿಂಧು ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.**

**ಉಪನಿರ್ದೇಶಕರು ಹಾಗೂ ಆಯ್ಕೆ ಪ್ರಾಧಿಕಾರಿಗಳು ಸಾರ್ವಜನಿಕ ಶಿಕ್ಷಣ ಇಲಾಖೆ ಗದಗ**

**2014–15 ನೇ ಸಾಲಿನ 1–5ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಅಧಿಸೂಚಿಸಲಾದ ಖಾಲಿ ಹುದ್ದೆಗಳ ವರ್ಗೀಕರಣ**

**(ವಿಷಯ:–ಉರ್ದು ಸಾಮಾನ್ಯ)**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ರೋಣ | 0 | 3 | 3 | 1 | ಇತರೆ | | | | | | | | 1 | **1** |
| | | | | 2 | ಗ್ರಾಮೀಣ ಅ | | | | | | | | 1 | **1** |
| | | | | 3 | ಅಂಗವಿಕಲ | | | | 1 | | | | | **1** |
| | | | | 4 | ಮಾಜಿ ಸೈನಿಕ | | | | | | | | | **0** |
| | | | | 5 | ಕ.ಮಾ.ಅಭ್ಯರ್ಥಿ | | | | | | | | | **0** |
| | | | | 6 | ಯೋ.ನಿರಾ.ಅ | | | | | | | | | **0** |
| | | | | | **ಒಟ್ಟು** | | | | **1** | | | | **2** | **3** |

**ಮೇಲಿನ [*] 2ಎ ಗುಂಪಿನ ಅಂಗವಿಕಲ ಬಿಂಧು ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.**

**ಸಹಿ/–**

**ಉಪನಿರ್ದೇಶಕರು(ಆಡಳಿತ) ಹಾಗೂ ಆಯ್ಕೆ ಪ್ರಾಧಿಕಾರಿ ಗದಗ ಜಿಲ್ಲೆ ಗದಗ**

ಉಪನಿರ್ದೇಶಕರು ಹಾಗೂ ಆಯ್ಕೆ ಪ್ರಾಧಿಕಾರಿಗಳು ಸಾರ್ವಜನಿಕ ಶಿಕ್ಷಣ ಇಲಾಖೆ ಗದಗ

2014–15 ನೇ ಸಾಲಿನ 1–5ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಅಧಿಸೂಚಿಸಲಾದ ಖಾಲಿ ಹುದ್ದೆಗಳ ವರ್ಗೀಕರಣ

(ವಿಷಯ:–ಮರಾಠಿ ಸಾಮಾನ್ಯ)

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಗದಗ ಶಹರ | 0 | 1 | 1 | 1 | ಇತರೆ | | 1 | | | | | | | 1 |
| | | | | 2 | ಗ್ರಾಮೀಣ ಅ | | | | | | | | | 0 |
| | | | | 3 | ಅಂಗವಿಕಲ | | | | | | | | | 0 |
| | | | | 4 | ಮಾಜಿ ಸೈನಿಕ | | | | | | | | | 0 |
| | | | | 5 | ಕ.ಮಾ.ಅಭ್ಯರ್ಥಿ | | | | | | | | | 0 |
| | | | | 6 | ಯೋ.ನಿರಾ.ಅ | | | | | | | | | 0 |
| | | | | | ಒಟ್ಟು | 0 | 1 | | | | | | | 1 |

ಉಪನಿರ್ದೇಶಕರು ಹಾಗೂ ಆಯ್ಕೆ ಪ್ರಾಧಿಕಾರಿಗಳು ಸಾರ್ವಜನಿಕ ಶಿಕ್ಷಣ ಇಲಾಖೆ ಗದಗ

2014–15 ನೇ ಸಾಲಿನ 6–8ನೇ ತರಗತಿಗಳ ಪ್ರಾಥಮಿಕ ಶಾಲಾ ಪದವಿಧರ ಶಿಕ್ಷಕರ ನೇಮಕಾತಿಗಾಗಿ ಅಧಿಸೂಚಿಸಲಾದ ಖಾಲಿ ಹುದ್ದೆಗಳ ವರ್ಗೀಕರಣ

ವಿಷಯ;–ಕನ್ನಡ ಸಾಮಾನ್ಯ

| 2014–15 ನೇ ಸಾಲಿನ ನೇಮಕಾತಿಗೆ ಅಧಿಸೂಚಿಸಿದ ಹುದ್ದೆಗಳು | | | | | | | | | | | | | | |
|---|---|---|---|---|---|---|---|---|---|---|---|---|---|---|
| | | | | | | | 1 | | | | | | | |
| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಗದಗ ಶಹರ | 0 | 1 | 1 | 1 | ಇತರೆ | 1 | | | | | | | | 1 |
| | | | | 2 | ಗ್ರಾಮೀಣ ಅ | | | | | | | | | 0 |
| | | | | 3 | ಅಂಗವಿಕಲ | | | | | | | | | 0 |
| | | | | 4 | ಮಾಜಿ ಸೈನಿಕ | | | | | | | | | 0 |
| | | | | 5 | ಕ.ಮಾ.ಅಭ್ಯರ್ಥಿ | | | | | | | | | 0 |
| | | | | 6 | ಯೋ.ನಿರಾ.ಅ | | | | | | | | | 0 |
| | | | | | ಒಟ್ಟು | 1 | | | | | | | | 1 |

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಗದಗ ಗ್ರಾಮೀಣ | 0 | 8 | 8 | 1 | ಇತರೆ | 1 | 1 | 1 | 1 | | | | 2 | **6** |
| | | | | 2 | ಗ್ರಾಮೀಣ ಅ | | | | | | | | 1 | **1** |
| | | | | 3 | ಅಂಗವಿಕಲ | | | | | | | | 1 | **1** |
| | | | | 4 | ಮಾಜಿ ಸೈನಿಕ | | | | | | | | | **0** |
| | | | | 5 | ಕ.ಮಾ.ಅಭ್ಯರ್ಥಿ | | | | | | | | | **0** |
| | | | | 6 | ಯೋ.ನಿರಾ.ಅ | | | | | | | | | **0** |
| | | | | | **ಒಟ್ಟು** | **1** | **1** | **1** | **1** | | | | **4** | **8** |

**ಮೇಲಿನ [*] ಸಾಮಾನ್ಯ ಗುಂಪಿನ ಅಂಗವಿಕಲ ಬಿಂಧು ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಮುಂಡರಗಿ | 0 | 16 | 16 | 1 | ಇತರೆ | 2 | 1 | 1 | 2 | 1 | | | 5 | **12** |
| | | | | 2 | ಗ್ರಾಮೀಣ ಅ | 1 | | | | | | | 2 | **3** |
| | | | | 3 | ಅಂಗವಿಕಲ | | | | | | | | 1 | **1** |
| | | | | 4 | ಮಾಜಿ ಸೈನಿಕ | | | | | | | | | **0** |
| | | | | 5 | ಕ.ಮಾ.ಅಭ್ಯರ್ಥಿ | | | | | | | | | **0** |
| | | | | 6 | ಯೋ.ನಿರಾ.ಅ | | | | | | | | | **0** |
| | | | | | **ಒಟ್ಟು** | **3** | **1** | **1** | **2** | **1** | | | **8** | **16** |

**ಮೇಲಿನ [*] ಸಾಮಾನ್ಯ ಗುಂಪಿನ ಅಂಗವಿಕಲ ಬಿಂಧು ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | **ಪ.ಜಾತಿ** | **ಪ.ಪಂಗಡ** | **ಪ್ರವರ್ಗ–1** | **2 ಎ** | **2 ಬಿ** | **3ಎ** | **3ಬಿ** | **ಸಾಮಾನ್ಯ** | **ಒಟ್ಟು** |
| ನರಗುಂದ | 0 | 9 | 9 | 1 | ಇತರೆ | 2 | 1 | 1 | 1 | | | | 2 | **7** |
| | | | | 2 | ಗ್ರಾಮೀಣ ಅ | | | | | | | | 1 | **1** |
| | | | | 3 | ಅಂಗವಿಕಲ | | | | | | | | 1 | **1** |
| | | | | 4 | ಮಾಜಿ ಸೈನಿಕ | | | | | | | | | **0** |
| | | | | 5 | ಕ.ಮಾ.ಅಭ್ಯರ್ಥಿ | | | | | | | | | **0** |
| | | | | 6 | ಯೋ.ನಿರಾ.ಅ | | | | | | | | | **0** |
| | | | | | **ಒಟ್ಟು** | **2** | **1** | **1** | **1** | | | | **4** | **9** |

**ಮೇಲಿನ [*] ಸಾಮಾನ್ಯ ಗುಂಪಿನ ಅಂಗವಿಕಲ ಬಿಂಧು ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | **ಪ.ಜಾತಿ** | **ಪ.ಪಂಗಡ** | **ಪ್ರವರ್ಗ–1** | **2 ಎ** | **2 ಬಿ** | **3ಎ** | **3ಬಿ** | **ಸಾಮಾನ್ಯ** | **ಒಟ್ಟು** |
| ರೋಣ | 0 | 35 | 35 | 1 | ಇತರೆ | 3 | 1 | 2 | 3 | 2 | 1 | 1 | 8 | **21** |
| | | | | 2 | ಗ್ರಾಮೀಣ ಅ | 2 | | | 1 | | | | 5 | **8** |
| | | | | 3 | ಅಂಗವಿಕಲ | 1 | | | 1 | | | | 1 | **3** |
| | | | | 4 | ಮಾಜಿ ಸೈನಿಕ | | | | | | | | 1 | **1** |
| | | | | 5 | ಕ.ಮಾ.ಅಭ್ಯರ್ಥಿ | | | | | | | | 1 | **1** |
| | | | | 6 | ಯೋ.ನಿರಾ.ಅ | | | | | | | | 1 | **1** |
| | | | | | **ಒಟ್ಟು** | **6** | **1** | **2** | **5** | **2** | **1** | **1** | **17** | **35** |

**ಮೇಲಿನ [*] ಪಜಾ ಮತ್ತು ಸಾಮಾನ್ಯ ಗುಂಪಿನ ಅಂಗವಿಕಲ ಬಿಂಧು ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | **ಪ.ಜಾತಿ** | **ಪ.ಪಂಗಡ** | **ಪ್ರವರ್ಗ–1** | **2 ಎ** | **2 ಬಿ** | **3ಎ** | **3ಬಿ** | **ಸಾಮಾನ್ಯ** | **ಒಟ್ಟು** |
| ಶಿರಹಟ್ಟಿ | 0 | 19 | 19 | 1 | ಇತರೆ | 2 | 1 | 1 | 2 | 1 | 1 | 1 | 5 | **14** |
| | | | | 2 | ಗ್ರಾಮೀಣ ಅ | 1 | | | | | | | 3 | **4** |
| | | | | 3 | ಅಂಗವಿಕಲ | | | | | | | | 1 | **1** |
| | | | | 4 | ಮಾಜಿ ಸೈನಿಕ | | | | | | | | | **0** |
| | | | | 5 | ಕ.ಮಾ.ಅಭ್ಯರ್ಥಿ | | | | | | | | | **0** |
| | | | | 6 | ಯೋ.ನಿರಾ.ಅ | | | | | | | | | **0** |
| | | | | | **ಒಟ್ಟು** | **3** | **1** | **1** | **2** | **1** | **1** | **1** | **9** | **19** |

**ಮೇಲಿನ [*] ಸಾಮಾನ್ಯ ಗುಂಪಿನ ಅಂಗವಿಕಲ ಬಿಂಧು ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.**

**ಸಹಿ /–**

**ಆಯ್ಕೆಪ್ರಾಧಿಕಾರಿ ಹಾಗೂ ಉಪನಿರ್ದೇಶಕರು**

**ಸಾರ್ವಜನಿಕ ಶಿಕ್ಷಣ ಇಲಾಖೆ ಗದಗ**

**ಉಪನಿರ್ದೇಶಕರು ಹಾಗೂ ಆಯ್ಕೆ ಪ್ರಾಧಿಕಾರಿಗಳು ಸಾರ್ವಜನಿಕ ಶಿಕ್ಷಣ ಇಲಾಖೆ ಗದಗ**

**2014–15 ನೇ ಸಾಲಿನ 6–8ನೇ ತರಗತಿಗಳ ಪ್ರಾಥಮಿಕ ಶಾಲಾ ಪದವಿಧರ ಶಿಕ್ಷಕರ ನೇಮಕಾತಿಗಾಗಿ ಅಧಿಸೂಚಿಸಲಾದ ಖಾಲಿ ಹುದ್ದೆಗಳ ವರ್ಗೀಕರಣ**

**ವಿಷಯ:–ಉರ್ದು ಸಾಮಾನ್ಯ**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | **ಪ.ಜಾತಿ** | **ಪ.ಪಂಗಡ** | **ಪ್ರವರ್ಗ–1** | **2 ಎ** | **2 ಬಿ** | **3ಎ** | **3ಬಿ** | **ಸಾಮಾನ್ಯ** | **ಒಟ್ಟು** |
| ಗದಗ ಶಹರ | 0 | 2 | 2 | 1 | ಇತರೆ | 1 | | | | | | | 1 | **2** |
| | | | | 2 | ಗ್ರಾಮೀಣ ಅ | | | | | | | | | **0** |
| | | | | 3 | ಅಂಗವಿಕಲ | | | | | | | | | **0** |
| | | | | 4 | ಮಾಜಿ ಸೈನಿಕ | | | | | | | | | **0** |
| | | | | 5 | ಕ.ಮಾ.ಅಭ್ಯರ್ಥಿ | | | | | | | | | **0** |
| | | | | 6 | ಯೋ.ನಿರಾ.ಅ | | | | | | | | | **0** |
| | | | | | **ಒಟ್ಟು** | **1** | | | | | | | **1** | **2** |

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಗದಗ ಗ್ರಾಮೀಣ | 0 | 3 | 3 | 1 | ಇತರೆ | 1 | 1 | | | | | | 1 | 3 |
| | | | | 2 | ಗ್ರಾಮೀಣ ಅ | | | | | | | | | |
| | | | | 3 | ಅಂಗವಿಕಲ | | | | | | | | | |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿರಾ.ಅ | | | | | | | | | |
| ಒಟ್ಟು | | | | | | 1 | 1 | | | | | | 1 | 3 |

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಮುಂಡರಗಿ | 0 | 1 | 1 | 1 | ಇತರೆ | 1 | | | | | | | | 1 |
| | | | | 2 | ಗ್ರಾಮೀಣ ಅ | | | | | | | | | |
| | | | | 3 | ಅಂಗವಿಕಲ | | | | | | | | | |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿರಾ.ಅ | | | | | | | | | |
| ಒಟ್ಟು | | | | | | 1 | 0 | 0 | 0 | 0 | 0 | 0 | 0 | 1 |

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ರೋಣ | 0 | 4 | 4 | 1 | ಇತರೆ | 1 | 1 | | | | | | 2 | **4** |
| | | | | 2 | ಗ್ರಾಮೀಣ ಅ | | | | | | | | | |
| | | | | 3 | ಅಂಗವಿಕಲ | | | | | | | | | |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿರಾ.ಅ | | | | | | | | | |
| | | | | | **ಒಟ್ಟು** | **1** | **1** | **0** | **0** | **0** | **0** | **0** | **2** | **4** |

ಸಹಿ /–

**ಆಯ್ಕೆಪ್ರಾಧಿಕಾರಿ ಹಾಗೂ ಉಪನಿರ್ದೇಶಕರು**

**ಸಾರ್ವಜನಿಕ ಶಿಕ್ಷಣ ಇಲಾಖೆ ಗದಗ**

**ಉಪನಿರ್ದೇಶಕರು ಹಾಗೂ ಆಯ್ಕೆ ಪ್ರಾಧಿಕಾರಿಗಳು ಸಾರ್ವಜನಿಕ ಶಿಕ್ಷಣ ಇಲಾಖೆ ಗದಗ**

**2014–15 ನೇ ಸಾಲಿನ 6–8ನೇ ತರಗತಿಗಳ ಪ್ರಾಥಮಿಕ ಶಾಲಾ ಪದವಿಧರ ಶಿಕ್ಷಕರ ನೇಮಕಾತಿಗಾಗಿ ಅಧಿಸೂಚಿಸಲಾದ ಖಾಲಿ ಹುದ್ದೆಗಳ ವರ್ಗೀಕರಣ**

**ವಿಷಯ;–ಇಂಗ್ಲೀಷ**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಗದಗ ಗ್ರಾಮೀಣ | 0 | 11 | 11 | 1 | ಇತರೆ | 2 | 1 | 1 | 1 | 1 | | | 3 | **9** |
| | | | | 2 | ಗ್ರಾಮೀಣ ಅ | | | | | | | | 1 | **1** |
| | | | | 3 | ಅಂಗವಿಕಲ | | | | | | | | 1 | **1** |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿರಾ.ಅ | | | | | | | | | |
| | | | | | **ಒಟ್ಟು** | **2** | **1** | **1** | **1** | **1** | | | **5** | **11** |

**ಮೇಲಿನ [*] ಸಾಮಾನ್ಯ ಗುಂಪಿನ ಅಂಗವಿಕಲ ಬಿಂಧು ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | **ಪ.ಜಾತಿ** | **ಪ.ಪಂಗಡ** | **ಪ್ರವರ್ಗ–1** | **2 ಎ** | **2 ಬಿ** | **3ಎ** | **3ಬಿ** | **ಸಾಮಾನ್ಯ** | **ಒಟ್ಟು** |
| **ಮುಂಡರಗಿ** | **0** | **16** | **16** | 1 | ಇತರೆ | 2 | 1 | 1 | 2 | 1 | | | 5 | **12** |
| | | | | 2 | ಗ್ರಾಮೀಣ ಅ | 1 | | | | | | | 2 | **3** |
| | | | | 3 | ಅಂಗವಿಕಲ | | | | | | | | 1 | **1** |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿರಾ.ಅ | | | | | | | | | |
| | | | | | **ಒಟ್ಟು** | **3** | **1** | **1** | **2** | **1** | | | **8** | **16** |

**ಮೇಲಿನ [*] ಸಾಮಾನ್ಯ ಗುಂಪಿನ ಅಂಗವಿಕಲ ಬಿಂಧು ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | **ಪ.ಜಾತಿ** | **ಪ.ಪಂಗಡ** | **ಪ್ರವರ್ಗ–1** | **2 ಎ** | **2 ಬಿ** | **3ಎ** | **3ಬಿ** | **ಸಾಮಾನ್ಯ** | **ಒಟ್ಟು** |
| **ನರಗುಂದ** | **0** | **9** | **9** | 1 | ಇತರೆ | 2 | 1 | 1 | 1 | | | | 2 | **7** |
| | | | | 2 | ಗ್ರಾಮೀಣ ಅ | | | | | | | | 1 | **1** |
| | | | | 3 | ಅಂಗವಿಕಲ | | | | | | | | 1 | **1** |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿರಾ.ಅ | | | | | | | | | |
| | | | | | **ಒಟ್ಟು** | **2** | **1** | **1** | **1** | | | | **4** | **9** |

**ಮೇಲಿನ [*] ಸಾಮಾನ್ಯ ಗುಂಪಿನ ಅಂಗವಿಕಲ ಬಿಂಧು ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | **ಪ.ಜಾತಿ** | **ಪ.ಪಂಗಡ** | **ಪ್ರವರ್ಗ–1** | **2 ಎ** | **2 ಬಿ** | **3ಎ** | **3ಬಿ** | **ಸಾಮಾನ್ಯ** | **ಒಟ್ಟು** |
| **ರೋಣ** | 0 | 39 | 39 | 1 | ಇತರೆ | 3 | 2 | 2 | 3 | 2 | 1 | 1 | 10 | **24** |
| | | | | 2 | ಗ್ರಾಮೀಣ ಅ | 2 | | | 2 | | | | 5 | **9** |
| | | | | 3 | ಅಂಗವಿಕಲ | 1 | | | 1 | | | | 1 | **3** |
| | | | | 4 | ಮಾಜಿ ಸೈನಿಕ | | | | | | | | 1 | **1** |
| | | | | 5 | ಕ.ಮಾ.ಅಭ್ಯರ್ಥಿ | | | | | | | | 1 | **1** |
| | | | | 6 | ಯೋ.ನಿರಾ.ಅ | | | | | | | | 1 | **1** |
| | | | | | **ಒಟ್ಟು** | **6** | **2** | **2** | **6** | **2** | **1** | **1** | **19** | **39** |

**ಮೇಲಿನ [*] ಪಜಾ, 2ಎ ಮತ್ತು ಸಾಮಾನ್ಯ ಗುಂಪಿನ ಅಂಗವಿಕಲ ಬಿಂಧು ದೃಷ್ಟಿ ಮಾಂದ್ಯ ಅಭ್ಯರ್ಥಿಗಳಿಗೆ ಅನ್ವಯಿಸುತ್ತದೆ.**

| ತಾಲ್ಲೂಕು/ ಬ್ಲಾಕ್ ಹೆಸರು | ಬ್ಯಾಕ್ ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | **ಪ.ಜಾತಿ** | **ಪ.ಪಂಗಡ** | **ಪ್ರವರ್ಗ–1** | **2 ಎ** | **2 ಬಿ** | **3ಎ** | **3ಬಿ** | **ಸಾಮಾನ್ಯ** | **ಒಟ್ಟು** |
|---|---|---|---|---|---|---|---|---|---|---|---|---|---|---|
| **ಶಿರಹಟ್ಟಿ** | 0 | 19 | 19 | 1 | ಇತರೆ | 2 | 1 | 1 | 2 | 1 | 1 | 1 | 5 | **14** |
| | | | | 2 | ಗ್ರಾಮೀಣ ಅ | 1 | | | | | | | 3 | **4** |
| | | | | 3 | ಅಂಗವಿಕಲ | | | | | | | | 1 | **1** |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿರಾ.ಅ | | | | | | | | | |
| | | | | | **ಒಟ್ಟು** | **3** | **1** | **1** | **2** | **1** | **1** | **1** | **9** | **19** |

**ಜಿ.ಎಲ್ ಬಾರಾಟಕ್ಕೆ**
**ಆಯುಕ್ತಪ್ರಾಧಿಕಾರಿ ಹಾಗೂ ಉಪನಿರ್ದೇಶಕರು**
**ಸಾರ್ವಜನಿಕ ಶಿಕ್ಷಣ ಇಲಾಖೆ ಗದಗ**

**PR- 59**
**SC - 50**

## ಸಾರ್ವಜನಿಕ ಶಿಕ್ಷಣ ಇಲಾಖೆ,
## ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ,
## ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು
# ನೇಮಕಾತಿ ಅಧಿಸೂಚನೆ

**ಸಂಖ್ಯೆ:ಇ3ಪ್ರಾ.ಶಾ.ಶಿ:ನೇಮಕ: 70/2014-15 ದಿನಾಂಕ:23ನೇ ಮಾರ್ಚ 2015**

***ವಿಷಯ***: 2014-15ನೇ ಸಾಲಿನಲ್ಲಿ 1-5, ಹಾಗೂ 6-8ನೇ ತರಗತಿ ಸರ್ಕಾರಿ ಪ್ರಾಥಮಿಕ ಶಾಲಾ ಸಹಶಿಕ್ಷಕರ ಮತ್ತು ಸಹಶಿಕ್ಷಕಿ ವೃಂದದ ಹುದ್ದೆಗಳನ್ನು ನೇರ ನೇಮಕಾತಿಯಿಂದ ಜಿಲ್ಲಾ ಮಟ್ಟದ [ಸಂಯುಕ್ತ ಸ್ಪರ್ಧಾತ್ಮಕ] ಪರೀಕ್ಷೆಯ ಮೂಲಕ ಭರ್ತಿ ಮಾಡುವ ಬಗ್ಗೆ.

***ಉಲ್ಲೇಖ***: 1.ಸರ್ಕಾರದ ಅಧಿಕೃತ ಪ್ರಕಟಣೆ ಸಂ:ಇಡಿ:ಡಿಪಿಎಆರ್:41:ಎಸ್ಆರ್ಇ:2001, ದಿನಾಂಕ:09.08.2001.

2] ಸರ್ಕಾರಿ ಆದೇಶ ಸಂ:ಸಿಆಸುಇ:08:ಸಹಿಮ:1995, ದಿನಾಂಕ:20.06.1995.

3] ಸರ್ಕಾರಿ ಆದೇಶ ಸಂ:ಸಿಆಸುಇ:97:ಸನೆನಿ:2002, ದಿನಾಂಕ:22.11.2002.

4] ಸರ್ಕಾರಿ ಆದೇಶ ಸಂ:ಸಿಆಸುಇ:53:ಸೇನೇನಿ:2007, ದಿನಾಂಕ:04.01.2008.

5] ಸರ್ಕಾರಿ ಆದೇಶ ಸಂ:ಇಡಿ:21:ಯೋಯೋಕ:2010, ದಿನಾಂಕ:02.11.2012.

6] ಸರ್ಕಾರಿ ಆದೇಶ ಸಂ:ಇಡಿ:238:ಪಿಬಿಐ:2012, ದಿನಾಂಕ:21.01.2013.

7] ಸರ್ಕಾರಿ ಆದೇಶ ಸಂ:ಸಿಆಸುಇ:50:ಎಸ್.ಆರ್.ಆರ್.:2007, ದಿನಾಂಕ:26.07.2011

8] ಸರ್ಕಾರಿ ಆದೇಶ ಸಂ :ಸಿಆಸುಇ:54:ಎಸ್.ಆರ್.ಆರ್.:2012,ದಿನಾಂಕ:07.08.2012

9] ಸರ್ಕಾರಿ ಆದೇಶ ಸಂ :ಸಿಆಸುಇ: 43: ಹೆಚ್‌ಕೆಸಿ 2013,ದಿನಾಂಕ:29.01.2014

10] ಸರ್ಕಾರಿ ಆದೇಶ ಸಂ : ಸಿಆಸುಇ 33 ಹೈಕಲು 2014,ದಿನಾಂಕ: 10.04.2014

11] ಸರ್ಕಾರಿ ಆದೇಶ ಸಂ:ಇಡಿ:626:ಪಿಬಿಎಸ್:2014, ದಿನಾಂಕ:31.01.2015

ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಪರೀಕ್ಷೆ ಮೂಲಕ ಅಂದರೆ ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ [ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್] [ರೆಕ್ರೂಟ್‌ಮೆಂಟ್][ಅಮೆಂಡ್‌ಮೆಂಟ್]ರೂಲ್ಸ್-2001[ಸಂಖ್ಯೆ:ಡಿಪಿಎಆರ್:41:ಎಸ್ಆರ್ಇ:2001,ದಿನಾಂಕ:09.08.2001]ರ ಹಾಗೂ ಇಡಿ:626:ಪಿಬಿಎಸ್:2014, ದಿನಾಂಕ:31.01.2015 ನಿಯಮಗಳನ್ವಯ ಆಯ್ಕೆ ಮಾಡಲು ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ. ನೇಮಕಾತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನ ಅಂದರೆ ದಿನಾಂಕ: 27-04-2015 ರಂದು ಅರ್ಹರಾಗಿರುವ ಹಾಗೂ ಶಿಕ್ಷಕರ ಅರ್ಹತಾ ಪರೀಕ್ಷೆ (ಟಿ.ಇ.ಟಿ)ಯಲ್ಲಿ ಅರ್ಹತೆಗಳಿಸಿ ಅರ್ಹತಾ ಪ್ರಮಾಣ ಪತ್ರವನ್ನು ಪಡೆದಿರುವ ಅಭ್ಯರ್ಥಿಗಳಿಂದ ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ ಆನ್‌ಲೈನ್ ಮೂಲಕ ಅರ್ಜಿಗಳನ್ನು ಕರೆಯಲಾಗಿದೆ. ಇತರೆ ಬೇರೆ ಯಾವುದೇ ನಮೂನೆಯಲ್ಲಿ ಸಲ್ಲಿಸುವ ಅರ್ಜಿಗಳನ್ನು ನೇಮಕಾತಿಗಾಗಿ ಪರಿಗಣಿಸಲಾಗುವುದಿಲ್ಲ.

ಆಯ್ಕೆ ಮಾಡಲು ಉಲ್ಲೇಖದಲ್ಲಿ ನಮೂದಿಸಿರುವ ನೇಮಕಾತಿ ನಿಯಮಗಳು, ಮೀಸಲಾತಿ ನಿಯಮಗಳು ಹಾಗೂ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರದ ಆದೇಶಗಳ ಪ್ರಕಾರ ಇರುವ ಪ್ರಚಲಿತ ನಿಯಮಗಳನ್ನು ಅನುಸರಿಸಿ ಆಯ್ಕೆ ಮಾಡಲು ಪ್ರಕಟಣೆಯನ್ನು ಸಾರ್ವಜನಿಕರ ತಿಳುವಳಿಕೆಗಾಗಿ ನೀಡಲಾಗಿದೆ.

ಟಿಪ್ಪಣಿ: ಈಗ ಅಧಿಸೂಚಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

### *02] ಆಯ್ಕೆಗೆ ಅರ್ಹತೆ:*

ಆಯ್ಕೆಗೆ ಅರ್ಹತೆ ಪಡೆಯಲು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳು ಆಯಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು

ಹೊಂದಿರಬೇಕು. ಶಿಕ್ಷಕರ ಅರ್ಹತಾ ಪರೀಕ್ಷೆಯಲ್ಲಿ (ಟಿ.ಇ.ಟಿ) ಅರ್ಹತೆಗಳಿಸಿದ ಅಭ್ಯರ್ಥಿಗಳು ಮಾತ್ರ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಲ್ಲದೆ, ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಅವರು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ.ಯಲ್ಲಿ ಆ ನೇಮಕಾತಿ ಭಾಷೆಯ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರಬೇಕು ಅಥವಾ ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

### *03] ನಿಗದಿತ ಅರ್ಜಿ ನಮೂನೆ ಸಲ್ಲಿಸುವ ವಿಧಾನ:*

ಅಭ್ಯರ್ಥಿಯು ಆನ್‌ಲೈನ್ [ON LINE] ಮೂಲಕ ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ಮುಖಾಂತರ ಅರ್ಜಿ ಸಲ್ಲಿಸಬೇಕು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶ ಇರುವುದಿಲ್ಲ. ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ [After submission of application] ದೊರೆಯುವ ಗಣಕೀಕೃತ ಅರ್ಜಿ ಸಂಖ್ಯೆಯನ್ನು ಪಡೆದುಕೊಳ್ಳುವುದು ಮತ್ತು ಸದರಿ ಸಂಖ್ಯೆಯನ್ನು ಕಡ್ಡಾಯವಾಗಿ ಬರೆದಿಟ್ಟುಕೊಳ್ಳತಕ್ಕದ್ದು. ಈ ಅರ್ಜಿ ಸಂಖ್ಯೆಯು ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ. ಆನ್ ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ ಮತ್ತು ಚಲನ್ ಪ್ರತಿಗಳ ಮುದ್ರಿತ ಪ್ರತಿಗಳನ್ನು ತೆಗೆದುಕೊಳ್ಳತಕ್ಕದ್ದು. ಮುದ್ರಿತ ಚಲನ್ ಪ್ರತಿಯನ್ನು ಆಧರಿಸಿ ಪರೀಕ್ಷಾ ಶುಲ್ಕವನ್ನು ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಯಾವುದಾದರೂ ಶಾಖೆಯಲ್ಲಿ ಪಾವತಿಸಬಹುದು. ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ. ಹಾಗೂ ಸದರಿ ಶುಲ್ಕವನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಈ ಕೆಳಕಂಡಂತೆ ನಿಗದಿಪಡಿಸಿದ ಅರ್ಜಿ ಶುಲ್ಕವನ್ನು ಕೊನೆಯ ದಿನಾಂಕದೊಳಗೆ ಆನ್‌ಲೈನ್ ಮೂಲಕವೇ ಪಾವತಿಸುವುದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶಪತ್ರಗಳನ್ನು ಮೇಲೆ ನಮೂದಿಸಿರುವ ವೆಬ್‌ಸೈಟ್‌ನಲ್ಲಿ ಡೌನ್‌ಲೋಡ್ ಮಾಡಿಕೊಳ್ಳಬೇಕು. ಪ್ರವೇಶ ಪತ್ರಗಳನ್ನು ಡೌನ್‌ಲೋಡ್ ಮಾಡಿಕೊಳ್ಳಲು ನಿಗದಿಪಡಿಸಿದ ಅವಧಿಯನ್ನು ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಅನ್‌ಲೈನ್ ಅರ್ಜಿಯನ್ನು ಸಲ್ಲಿಸುವಾಗ ಅಭ್ಯರ್ಥಿಗೆ ನೀಡಿರುವ ನೊಂದಣಿ ಸಂಖ್ಯೆ ಮತ್ತು ಇತರೆ ಮಾಹಿತಿಯನ್ನು ವೆಬ್‌ಸೈಟ್‌ನಲ್ಲಿ ನಮೂದಿಸಿ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಡೌನ್‌ಲೋಡ್ ಮಾಡಿಕೊಳ್ಳುವುದು. ಕೊನೆಯ ದಿನಾಂಕದ ನಂತರ ಪಾವತಿಸಿದ ಅರ್ಜಿ ಶುಲ್ಕವನ್ನು ಪರಿಗಣಿಸಲಾಗುವುದಿಲ್ಲ ಮತ್ತು ಸ್ವೀಕರಿಸಲಾಗುವುದಿಲ್ಲ. ಅರ್ಜಿಗಳನ್ನು ಆನ್‌ಲೈನ್ ಮೂಲಕ ಭರ್ತಿ ಮಾಡಬೇಕಾಗಿದ್ದು, ಈ ಬಗ್ಗೆ ಮಾರ್ಗಸೂಚಿಯನ್ನು ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗಿದೆ.

### *04] ಅರ್ಜಿ ಸಲ್ಲಿಸಲು ಪಾವತಿಸಬೇಕಾದ ಶುಲ್ಕ:*

| ಕ್ರಸ | ವಿವರ | 1-5 ಅಥವಾ 6-8 ಒಂದು ಪರೀಕ್ಷೆಗೆ ( ರೂಗಳಲ್ಲಿ) | 1-5 ಅಥವಾ 6-8 ಎರಡು ಪರೀಕ್ಷೆಗೆ ( ರೂಗಳಲ್ಲಿ) |
|---|---|---|---|
| 01 | ಪರಿಶಿಷ್ಠ ಜಾತಿ, ಪರಿಶಿಷ್ಠ ವರ್ಗ, ಪ್ರವರ್ಗ-1/ ಅಂಗವಿಕಲ ಅಭ್ಯರ್ಥಿಗಳಿಗೆ ಸೇರಿದ ಅಭ್ಯರ್ಥಿಗಳಿಗೆ | 250 | 400 |
| 02 | ಇತರೆ ಎಲ್ಲಾ ಅಭ್ಯರ್ಥಿಗಳಿಗೆ | 500 | 800 |

### *05] ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:*

ದಿನಾಂಕ:27-04-2015 ಅಥವಾ ಅದಕ್ಕೂ ಮೊದಲು.

### *06] ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ:*

ಎಲ್ಲಾ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗದಿಪಡಿಸಿದೆ.

ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಹುದ್ದೆಗಳಿಗೆ ಟಿ.ಇ.ಟಿ ಪರೀಕ್ಷೆಯನ್ನು ತೇರ್ಗಡೆಯಾಗಿದ್ದಲ್ಲಿ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳ ಅವಶ್ಯಕತೆ ಇರುವುದಿಲ್ಲ. ಆದರೆ, ಹುದ್ದೆಗಳಿಗೆ ತಮ್ಮ ಆಧ್ಯತೆಯನ್ನು ನಮೂದಿಸಬೇಕು. ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿಯರ ವೃಂದದ ವಿಷಯಗಳ ಹಾಗೂ ವಿವಿಧ ಮಾಧ್ಯಮದ ಬ್ಲಾಕ್‌ವಾರು ಹುದ್ದೆಗಳ ಸಂಖ್ಯೆ ಮತ್ತು ಮೀಸಲಾತಿ ವರ್ಗೀಕರಣದ ವಿವರಗಳನ್ನು ಈ ಅಧಿಸೂಚನೆಗೆ ಲಗತ್ತಿಸಿರುವ *"ವರ್ಗೀಕರಣದ ಅನುಬಂಧದಲ್ಲಿ"* ಪ್ರತ್ಯೇಕವಾಗಿ ನೀಡಲಾಗಿದೆ.

### *07] ಆಯ್ಕೆಗಾಗಿ 1-5ನೇ ತರಗತಿ ಹಾಗೂ 6-8 ನೇ ತರಗತಿ ಕಿರಿಯ /ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಬೋಧಿಸುವ ಶಿಕ್ಷಕರಿಗೆ ಹುದ್ದೆಗಳು ,ವೇತನ ಶ್ರೇಣಿ: ಅರ್ಹತೆ ಮತ್ತು ಆಯ್ಕೆ ವಿಧಾನವನ್ನು ಈ ಕೆಳಗೆ ನೀಡಲಾಗಿದೆ*

### *08] ಅಭ್ಯರ್ಥಿಗಳ ಅರ್ಹತೆ:*

ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ಅರ್ಹತೆಗಳು.

- ***ವಿದ್ಯಾರ್ಹತೆ:***

ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಯು ಉಲ್ಲೇಖ(11)ರ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಗೊಳಿಸಲಾಗಿರುವ ವಿದ್ಯಾರ್ಹತೆ ಹೊಂದಿರಬೇಕು. ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ವಿದ್ಯಾರ್ಹತೆ ವಿವರಗಳು ಕೆಳಗಿನಂತೆ ಇರುತ್ತವೆ.

***01.*** ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ], ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

***02.*** ಹುದ್ದೆಗಳ ಸಂಖ್ಯೆ ಹಾಗೂ ವಿಷಯಗಳು ಸಂಬಂಧಿಸಿದ ಅಧಿಸೂಚನೆಯಲ್ಲಿ ನಮೂದಿಸಿರುವ ಮ್ಯಾಟ್ರಿಕ್ಸ್‌ಗೆ ಅನುಗುಣವಾಗಿರುತ್ತದೆ. ಮ್ಯಾಟ್ರಿಕ್ಸ್ ಪ್ರತಿಯನ್ನು ಮಾಹಿತಿ ಪುಸ್ತಕದೊಂದಿಗೆ ಲಗತ್ತಿಸಿದೆ.

***ವೇತನ ಶ್ರೇಣಿ–[13600–26000]:–***

13600–300–14200–350–15600–400–17200–450–19000–500–21000–600–24600–700–26000

### ***I ಪ್ರಾಥಮಿಕ ಶಾಲಾ 1–5ನೇ ತರಗತಿಗಾಗಿ ಸರ್ಕಾರಿ ಕಿರಿಯ/ಹಿರಿಯ ಪ್ರಾಥಮಿಕ ಶಾಲೆಗೆ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ] ಹುದ್ದೆಗಳಿಗೆ:***

***ಅ.*** ಅಭ್ಯರ್ಥಿಯು ಗೊತ್ತುಪಡಿಸಿದ ಮಂಡಳಿಯು ನಡೆಸುವ ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಸಾಮಾನ್ಯ ಹಾಗೂ ಹಿಂದುಳಿದ ಅಭ್ಯರ್ಥಿಗಳೂ ಕನಿಷ್ಟ ಶೇಕಡ 50%ನ್ನು ಹಾಗೂ. ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ 45% ಅಂಕಗಳೊಂದಿಗೆ ತೇರ್ಗಡೆ ಹೊಂದಿರಬೇಕು. ಮತ್ತು ಎರಡು ವರ್ಷದ ಡಿ.ಇಡಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರತಕ್ಕದ್ದು

ಅಥವಾ

ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ ಶೇಕಡ 45% ನ್ನು **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳನ್ನು ನಾಲ್ಕು ವರ್ಷದ ಬ್ಯಾಚುಲರ್ ಆಫ್ ಎಲಿಮೆಂಟರಿ ಎಜುಕೇಷನ್‌ನ ವಿದ್ಯಾರ್ಹತೆ ಹೊಂದಿರತಕ್ಕದ್ದು

ಅಥವಾ

ಮಂಡಳಿಯು ನಡೆಸುವ ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ 45 % **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳನ್ನು ಪಡೆದಿರತಕ್ಕದ್ದು ಮತ್ತು ಎನ್.ಸಿ.ಟಿ.ಇ ನಿಯಮಗಳ ರೀತ್ಯಾ ಎರಡು ವರ್ಷದ ಡಿಪ್ಲೋಮೋ ಇನ್ ಎಜುಕೇಷನ್ ( ಸ್ಪೆಷಲ್ ಎಡುಕೇಷನ್)ನ್ನು ಹೊಂದಿರತಕ್ಕದ್ದು

ಮತ್ತು

ಸರ್ಕಾರವು ಗೊತ್ತುಪಡಿಸಿದ ಸಕ್ಷಮ ಪ್ರಾಧಿಕಾರಿಯು ನಡೆಸುವ ಶಿಕ್ಷಕರ ಅರ್ಹತಾ ಪರೀಕ್ಷೆ ಪೇಪರ್–01 ರಲ್ಲಿ ತೇರ್ಗಡೆಹೊಂದಿರತಕ್ಕದ್ದು

ಹಾಗೂ

ಸರ್ಕಾರಿ ಕಿರಿಯ ಹಾಗೂ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 1–5ನೇ ತರಗತಿ ಬೋಧಿಸಲು ಅರ್ಜಿಸಲ್ಲಿಸುವ ಅಭ್ಯರ್ಥಿಯು ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಸಾಮಾನ್ಯ ( ಕನ್ನಡ, ಉರ್ದು.ತಮಿಳ್, ತೆಲುಗು, ಬಂಗಾಲಿ ಅಥವಾ ಮರಾಠಿ) ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ / ಡಿ.ಇಡಿ./ ತತ್ಸಮಾನ ಪರೀಕ್ಷೆಯಲ್ಲಿ ಅಭ್ಯಾಸ ಮಾಡಿರಬೇಕು. ಅಥವಾ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಅಬ್ಯಾಸ ಮಾಡಿರಬೇಕು.

ಅಥವಾ

***ಕನ್ನಡ ಮಾಧ್ಯಮದ ಶಾಲೆಗಳ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***II 6-8 ನೇ ತರಗತಿಯಲ್ಲಿನ ಉನ್ನತೀಕರಿಸಿದ ಪ್ರಾಥಮಿಕ ಶಾಲೆಗಳಿಗೆ ಪದವೀಧರ ಸಹಶಿಕ್ಷಕರ ನೇಮಕಾತಿ***

*01.* ಪ್ರಾಥಮಿಕ ಶಾಲಾ ಪದವೀದರ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ], ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

*02.* ಹುದ್ದೆಗಳ ಸಂಖ್ಯೆ ಹಾಗೂ ವಿಷಯಗಳು ಸಂಬಂಧಿಸಿದ ಅಧಿಸೂಚನೆಯಲ್ಲಿ ನಮೂದಿಸಿರುವ ಮ್ಯಾಟ್ರಿಕ್ಸ್‌ಗೆ ಅನುಗುಣವಾಗಿರುತ್ತದೆ. ಮ್ಯಾಟ್ರಿಕ್ಸ್ ಪ್ರತಿಯನ್ನು ಮಾಹಿತಿ ಮಸ್ತಕದೊಂದಿಗೆ ಲಗತ್ತಿಸಿದೆ.

***ವೇತನ ಶ್ರೇಣಿ–[14550–26700]:–***

***ವೇತನಶ್ರೇಣಿ–[14550–**350–15600–400–17200–450–19000–500–21000–600–24600–700–***26700]:***

***02] ಆಯ್ಕೆಗೆ ಅರ್ಹತೆ:***

ಆಯ್ಕೆಗೆ ಅರ್ಹತೆ ಪಡೆಯಲು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳು ಆಯಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿ ಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು ಹೊಂದಿರಬೇಕು. ಶಿಕ್ಷಕರ ಅರ್ಹತಾ ಪರೀಕ್ಷೆಯಲ್ಲಿನ (ಟಿ.ಇ.ಟಿ) ಪೇಪರ್–2ನಲ್ಲಿ ಅರ್ಹತೆಗಳಿಸಿದ ಅಭ್ಯರ್ಥಿಗಳು ಮಾತ್ರ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಲ್ಲದೆ, ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಅವರು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ./ ಡಿಇಡಿ/ಬಿಇಡಿ ಯಲ್ಲಿ ಆ ನೇಮಕಾತಿ ವಿಷಯದ ಭಾಷಾ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರಬೇಕು ಅಥವಾ ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

***I ಪ್ರಾಥಮಿಕ ಶಾಲಾ 6–8ನೇ ತರಗತಿ ಪದವೀಧರ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ] ಹುದ್ದೆಗಳಿಗೆ:***

**ಅ** ಹಿರಿಯ ಪ್ರಾಥಮಿಕ ಶಾಲೆಯಲ್ಲಿನ ಪದವೀದರ ಶಿಕ್ಷಕರ ನೇಮಕಾತಿಗಾಗಿ ಅಭ್ಯರ್ಥಿಯು ಬಿಎ ಪದವಿಯನ್ನು ಮತ್ತು ಎರಡು ವರ್ಷದ ಡಿ.ಇಡಿ ಪರೀಕ್ಷೆಯನ್ನು ತೇರ್ಗಡೆ ಹೊಂದಿರಬೇಕು.

ಅಥವಾ

ಬಿಎ ಪದವಿಯಲ್ಲಿ ಶೇಕಡ 50% ಅಂಕಗಳನ್ನು ಮತ್ತು ಒಂದು ವರ್ಷದ ಬಿ.ಇಡಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

ಅಥವಾ

ಪಿ.ಯು.ಸಿ ಯಲ್ಲಿ ಶೇಕಡ 50% ಅಂಕಗಳೊಂದಿಗೆ 04 ವರ್ಷದ ಬ್ಯಾಚುಲರ್ ಆಫ್ ಎಲಿಮೆಂಟರಿ ಎಜುಕೇಷನ್ (ಬಿ.ಎಲ್.ಇಡಿ)ನಲ್ಲಿ ಉತ್ತೀರ್ಣರಾಗಿರಬೇಕು

ಅಥವಾ

ಪಿ.ಯು.ಸಿ ಯಲ್ಲಿ ಶೇಕಡ 50% ಅಂಕಗಳು ಹಾಗೂ 04 ವರ್ಷದ ಬ್ಯಾಚುಲರ್ ಆಫ್ ಎಜುಕೇಷನ್( ಬಿಎ.ಇಡಿ) ನಲ್ಲಿ ಉತ್ತೀರ್ಣರಾಗಿರಬೇಕು

ಅಥವಾ

ಬಿ.ಎ ಪದವಿಯಲ್ಲಿ ಮತ್ತು ಒಂದು ವರ್ಷದ ಬಿಇಡಿ (ಸ್ಪೆಷಲ್ ಎಜುಕೇಷನ್) ನಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ ಶೇಕಡ 45% ಅಂಕಗಳನ್ನು **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳನ್ನು ಪದವಿಯಲ್ಲಿ ಹೊಂದಿರತಕ್ಕದ್ದು

ಮತ್ತು

ಸರ್ಕಾರ ಗೊತ್ತುಪಡಿಸಿದ ಸಕ್ಷಮ ಪ್ರಾಧಿಕಾರಿಯು ನಡೆಸಿರುವ ಶಿಕ್ಷಕರ ಅರ್ಹತಾ ಪರೀಕ್ಷೆ (ಪೇಪರ್–2) ನ್ನು ತೇರ್ಗಡೆಹೊಂದಿರತಕ್ಕದ್ದು

ಮತ್ತು

**ಆ.** ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 6–8ನೇ ತರಗತಿ ಬೋಧಿಸಲು ಅರ್ಜಿಸಲ್ಲಿಸುವ ಅಭ್ಯರ್ಥಿಯು ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಸಾಮಾನ್ಯ (ಕನ್ನಡ, ಉರ್ದು, ತೆಮಿಳ್, ತೆಲುಗು, ಬಂಗಾಲಿ

ಅಥವಾ ಮರಾಠಿ) ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿ/ ಡಿಇಡಿ/ ಬಿಇಡಿ ತತ್ಸಮಾನ ಪರೀಕ್ಷೆಯಲ್ಲಿ ಅಭ್ಯಾಸ ಮಾಡಿರಬೇಕು. ಅಥವಾ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿಯಲ್ಲಿ ಅಬ್ಯಾಸ ಮಾಡಿರಬೇಕು.

ಅಥವಾ

***ಕನ್ನಡ ಮಾಧ್ಯಮದ ಶಾಲೆಗಳ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***II ಪ್ರಾಥಮಿಕ ಶಾಲಾ 6-8ನೇ ತರಗತಿ ಪದವೀಧರ ಸಹಶಿಕ್ಷಕ/ಶಿಕ್ಷಕಿ [ಆಂಗ್ಲ ಭಾಷೆ] ಹುದ್ದೆಗಳಿಗೆ:***

***01.*** 03 ವರ್ಷದ ಕಲಾ/ ವಿಜ್ಞಾನ ಪದವಿಯಲ್ಲಿ ಶೇಕಡಾ 50% ಅಂಕಗಳನ್ನು ಮತ್ತು ಆಂಗ್ಲಭಾಷೆಯನ್ನು ಒಂದು ಐಚ್ಚಿಕ ವಿಷಯವಾಗಿ ಮೂರು ವರ್ಷದ ಪದವಿಯಲ್ಲಿ ಅಭ್ಯಾಸಮಾಡಿರಬೇಕು

.

***ಅಥವಾ***

ಬಿಎ.ಇಡಿ/ ಬಿಎಸ್ಸಿ ಇಡಿ ಪದವಿಯಲ್ಲಿ ಕನಿಷ್ಟ ಶೇಕಡಾ 50% ಅಂಕಗಳನ್ನು ಮತ್ತು ಆಂಗ್ಲಭಾಷೆಯನ್ನು ಒಂದು ಐಚ್ಚಿಕ ವಿಷಯವಾಗಿ ಅಭ್ಯಾಸಮಾಡಿರಬೇಕು

***ಅಥವಾ***

ಪಿಯುಸಿ. ವಿಜ್ಞಾನ (ಪಿ.ಸಿ.ಎಂಬಿ)ಯಲ್ಲಿ ಶೇಕಡಾ 50% ಅಂಕಗಳನ್ನು ಮತ್ತು 04 ವರ್ಷದ ಬ್ಯಾಚುಲರ್ ಇನ್ ಎಲಿಮೆಂಟರಿ ಎಜುಕೇಷನ್( ಬಿ.ಎಲ್.ಇಡಿ) ನಲ್ಲಿ ಉತ್ತೀರ್ಣರಾಗಿರಬೇಕು ಹಾಗೂ ಆಂಗ್ಲಭಾಷೆಯನ್ನು ಐಚ್ಚಿಕ ವಿಷಯವಾಗಿ 03 ವರ್ಷದ ಪದವಿಯಲ್ಲಿ ಅಭ್ಯಾಸಮಾಡಿರಬೇಕು

ಮತ್ತು

ಅ) ಬಿಇಡಿ/ ಡಿಇಡಿ ಯಲ್ಲಿ ಆಂಗ್ಲಭಾಷೆಯನ್ನು ಬೋಧನಾ ವಿಷಯವಾಗಿ ಅಭ್ಯಾಸಮಾಡಿರಬೇಕು ( Method of teaching)

***ಅಥವಾ***

ಒಂದು ವರ್ಷದ ಬ್ಯಾಚುಲರ್ ಆಫ್ ಎಜುಕೇಷನ್ ಬಿಇಡಿ ಪದವಿ ( ಸ್ಪೆಷಲ್ ಎಜುಕೇಷನ್) ನಲ್ಲಿ ಆಂಗ್ಲಭಾಷೆಯನ್ನು ಬೋಧನಾ ವಿಷಯವಾಗಿ ಅಭ್ಯಾಸಮಾಡಿರಬೇಕು ( Method of teaching)

***ಅಥವಾ***

ಆಂಗ್ಲಭಾಷೆಯನ್ನು ಐಚ್ಚಿಕ ವಿಷಯವಾಗಿ ಬಿಎ(ಕಲಾ) ಮತ್ತು ಬಿ.ಎಸ್ಸಿ (ವಿಜ್ಞಾನ) ಪದವಿಯಲ್ಲಿ ಅಭ್ಯಾಸಮಾಡಿರಬೇಕು ಮತ್ತು ಬಿಇಡಿ ಪದವಿಯಲ್ಲಿ/ ಎರಡು ವರ್ಷದ ಡಿಇಡಿಯಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ ಶೇಕಡ 45% ನ್ನು **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳೊಂದಿಗೆ ಮೂರು ವರ್ಷದ ಪದವಿಯಲ್ಲಿ ಆಂಗ್ಲಭಾಷೆಯನ್ನು ಐಚ್ಚಿಕ ವಿಷಯವಾಗಿ ಅಬ್ಯಾಸಮಾಡಿರಬೇಕು

ಮತ್ತು

ಅ) ಸರ್ಕಾರ ಗೊತ್ತುಪಡಿಸಿದ ಸಕ್ಷಮ ಪ್ರಾಧಿಕಾರಿಯು ನಡೆಸಿರುವ ಶಿಕ್ಷಕರ ಅರ್ಹತಾ ಪರೀಕ್ಷೆ (ಪೇಪರ್-2) ನ್ನು ತೇರ್ಗಡೆಹೊಂದಿರತಕ್ಕದ್ದು

***ಆ) ಕಲಾ/ ವಿಜ್ಞಾನ ವಿಷಯದ ಪದವಿಯಲ್ಲಿ*** ಆಂಗ್ಲಭಾಷೆಯನ್ನು ಐಚ್ಚಿಕ ವಿಷಯವಾಗಿ ಅಭ್ಯಾಸಮಾಡದಿದ್ದಲ್ಲಿ

ಅ) ಯು.ಜಿಸಿ ಯಿಂದ ಮಾನ್ಯತೆ ಪಡೆದ ಅಂಗೀಕೃತ ವಿಶವಿದ್ಯಾಲಯದಿಂದ ಸ್ನಾತಕೋತ್ತರ ಪದವಿಯಲ್ಲಿ ಆಂಗ್ಲ ಭಾಷೆಯನ್ನು ಅಭ್ಯಾಸಮಾಡಿರಬೇಕು

ಅಥವಾ

ಆಂಗ್ಲ ಭಾಷಾ ಹುದ್ದೆಗೆ ಅಭ್ಯರ್ಥಿಗಳು ರೀಜನಲ್ ಇನ್ಸ್‌ಟಿಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾ ಇವರು ನಡೆಸುವ ಪೋಸ್ಟ್ ಗ್ರಾಜುಯೇಟ್ ಡಿಪ್ಲೊಮೋ ಇನ್ ಇಂಗ್ಲಿಷ್ ಪ್ರಮಾಣ ಪತ್ರವನ್ನು ಹೊಂದಿದ್ದಲ್ಲಿ ಪರಿಗಣಿಸಲಾಗುವುದು

ಮತ್ತು

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 6–8ನೇ ತರಗತಿ ಬೋದಿಸಲು ಅರ್ಜಿಸಲ್ಲಿಸುವ ಅಭ್ಯರ್ಥಿಯು ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿ/ ಡಿಇಡಿ/ ಬಿಇಡಿ ತತ್ಸಮಾನ ಪರೀಕ್ಷೆಯಲ್ಲಿ ಅಭ್ಯಾಸ ಮಾಡಿರಬೇಕು. ಅಥವಾ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿಯಲ್ಲಿ ಅಬ್ಯಾಸ ಮಾಡಿರಬೇಕು.

***C&R Rules ನಲ್ಲಿ "Note: Primary School Assistant Masters / Misters [Science], [English], [Hindi], in primary, Higher Primary and Model Higher Primary School shall form port of the General cadre and they shall teach other subjects also in addition to science / English / Hindi to make up the normal work load for the teacher"*** ಎಂದಿರುತ್ತದೆ.

ಆದ್ದರಿಂದ ಪ್ರಾಥಮಿಕ, ಹಿರಿಯ ಮಾದರಿ ಹಾಗೂ ಉನ್ನತೀಕರಿಸಿದ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ವಿಜ್ಞಾನ / ಆಂಗ್ಲ / ಹಿಂದಿ ಪ್ರಾಥಮಿಕ ಶಾಲಾ ಸಹಶಿಕ್ಷಕರು ಸಾಮಾನ್ಯ ಶಿಕ್ಷಕರ ಹುದ್ದೆಯ ಭಾಗವಾಗಿರುತ್ತಾರೆ. ಈ ಶಿಕ್ಷಕರು ಕಾರ್ಯಭಾರ ಹೊಂದಾಣಿಕೆಗೆ ವಿಜ್ಞಾನ / ಆಂಗ್ಲ / ಹಿಂದಿ ವಿಷಯಗಳೊಂದಿಗೆ ಇತರೆ ವಿಷಯಗಳನ್ನು ಸಹಾ ಸಂಬಂಧಿಸಿದ ಶಾಲಾ ಮಾಧ್ಯಮಗಳಲ್ಲಿ ಬೋಧಿಸತಕ್ಕದ್ದು.

***ಸೂಚನೆ:*** ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗುವುದಿಲ್ಲ. ನಿಗದಿ ಪಡಿಸಿದ ಕೊನೆಯ ದಿನಾಂಕದಂದು ವಿದ್ಯಾರ್ಹತೆಯ ಅಂಕಪಟ್ಟಿ ಹಾಗೂ ಇತರೆ ಸರ್ಟಿಫಿಕೇಟ್‌ಗಳನ್ನು ಪಡೆದಿರಬೇಕು.

### *09] ವಯೋಮಿತಿ:*

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

***[ಅ]*** ಕನಿಷ್ಠ 18ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

***[ಆ]*** ಗರಿಷ್ಠ ವಯೋಮಿತಿ:

| | |
|---|---|
| ಸಾಮಾನ್ಯ ವರ್ಗ | 40 ವರ್ಷ |
| 2ಎ, 2ಬಿ, 3ಎ, 3ಬಿ | 43 ವರ್ಷ |
| ಪ.ಜಾ/ಪ.ಪಂ/ಪ್ರವರ್ಗ–1 | 45 ವರ್ಷ |

***ಸೂಚನೆ:*** ಗೌರವ ಶಿಕ್ಷಕರಿಗೆ ಗರಿಷ್ಠ ವಯೋಮಿತಿ ಅನ್ವಯಿಸುವುದಿಲ್ಲ.

### *ಟಿಪ್ಪಣಿ: ಗೌರವ ಶಿಕ್ಷಕರೆಂದರೆ:*

ಜಿಲ್ಲಾ ಪಂಚಾಯತ್ / ಮಂಡಲ ಪಂಚಾಯತ್ ವತಿಯಿಂದ ನೇಮಕಾತಿ ಹೊಂದಿ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯ ನಿರ್ವಹಿಸಿರಬೇಕು / ನಿರ್ವಹಿಸುತ್ತಿರಬೇಕು. ಹಾಗೂ ಗೌರವಧನವನ್ನು ಜಿಲ್ಲಾ ಪಂಚಾಯತ್ / ಮಂಡಲ ಪಂಚಾಯತ್ ವತಿಯಿಂದ ಪಡೆದಿರಬೇಕು / ಪಡೆಯುತ್ತಿರಬೇಕು. ಖಾಸಗಿ ಶಾಲೆಗಳಲ್ಲಿ ಮತ್ತು ಇತರ ಇಲಾಖೆಗಳಲ್ಲಿ ಗೌರವ ಶಿಕ್ಷಕರಾಗಿ ಕಾರ್ಯ ನಿರ್ವಹಿಸಿರುವವರು ಕೃಪಾಂಕ ಪಡೆಯಲು ಅರ್ಹರಿರುವುದಿಲ್ಲ.

### *10] ಅರ್ಹತೆ [ಮೆರಿಟ್] ನಿರ್ಧರಿಸುವ ವಿಧಾನ:*

### *ಎ] 1–5ನೇ ತರಗತಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ*

- ಟಿಇಟಿ ಪರೀಕ್ಷೆಯ ಪೇಪರ್–1 ನ್ನು ಕಡ್ಡಾಯವಾಗಿ ತೇರ್ಗಡೆಯಾಗಿರಬೇಕು
- ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ದ್ವಿತೀಯ ಪಿ.ಯು.ಸಿ.ಯಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಪ್ರಥಮ ಮತ್ತು ದ್ವಿತೀಯ ಟಿ.ಸಿ.ಹೆಚ್ / ಡಿ.ಇಡಿ.,ಗಳ ಬಾಹ್ಯ ಅಂಕಗಳು ಪಿ.ಯು.ಸಿ ಎಜುಕೇಷನ್ ಪರೀಕ್ಷೆಗಳಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.

- ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾ ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಎಸ್.ಎಸ್.ಎಲ್.ಸಿ / ದ್ವಿತೀಯ ಪಿ.ಯು.ಸಿ ಶೇಕಡಾ ಅಂಕಗಳ ಶೇಕಡಾ 35% + ಎರಡು ವರ್ಷಗಳ ಟಿ.ಸಿ.ಹೆಚ್ / ಡಿ.ಇಡಿ., ಬಾಹ್ಯ ಅಂಕಗಳ ಶೇಕಡಾ ಅಂಕ / ಪಿ.ಯು.ಸಿ ಎಜುಕೇಷನ್‌ನ ದ್ವಿತೀಯ ಪರೀಕ್ಷೆಯ ಶೇಕಡಾ ಅಂಕಗಳ <u>15 %</u> + ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡಾ ಅಂಕಗಳ <u>35%</u> ಹಾಗೂ ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಶೇಕಡ ಅಂಕಗಳ <u>15%</u> ವೇಟೇಜ್ (weightage)ಇವುಗಳ ಸರಾಸರಿ ಆಧರಿಸಿ ಮೆರಿಟನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಸೇವೆ ಸಲ್ಲಿಸಿದ್ದಲ್ಲಿ / ಸಲ್ಲಿಸುತ್ತಿದ್ದಲ್ಲಿ ಇವರಿಗೆ ಪೂರ್ಣಗೊಂಡ ಪ್ರತಿ ವರ್ಷದ ಸೇವಾ ಅವಧಿಗೆ 3 ಕೃಪಾಂಕಗಳಂತೆ ಗರಿಷ್ಠ 15 ಕೃಪಾಂಕಗಳ ಮಿತಿಗೆ ಒಳಪಟ್ಟ ಕೃಪಾಂಕಗಳನ್ನು ನೀಡಲಾಗುವುದು.
- ಗೌರವ ಶಿಕ್ಷಕರು / ಅರೆಕಾಲಿಕ ಶಿಕ್ಷಕರಾಗಿದ್ದಲ್ಲಿ ಸಂಬಂಧಿಸಿದ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಸಲ್ಲಿಸಬೇಕು.
- ಸರಾಸರಿ ಶೇಕಡಾವಾರು ಅಂಕಕ್ಕೆ ಅಭ್ಯರ್ಥಿಯ ಕೃಪಾಂಕಗಳನ್ನು ಸೇರಿಸಲಾಗುವುದು. [ಕೃಪಾಂಕಕ್ಕೆ ಅಭ್ಯರ್ಥಿಯು ಅರ್ಹರಿದ್ದಲ್ಲಿ ಮಾತ್ರ] ಈ ಒಟ್ಟು ಅಂಕಗಳನ್ನು ಅರ್ಹತಾ ಅಂಕವೆಂದು ಪರಿಗಣಿಸಲಾಗುತ್ತದೆ.

***ಬಿ] 6–8 ನೇ ತರಗತಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ***

- ಟಿಇಟಿ ಪರೀಕ್ಷೆಯ ಪೇಪರ್–2ನ್ನು ಕಡ್ಡಾಯವಾಗಿ ತೇರ್ಗಡೆಯಾಗಿರಬೇಕು
- ಪದವೀಧರ ಸಹಶಿಕ್ಷಕರ (ಸಾಮಾನ್ಯ) ಹುದ್ದೆಗೆ ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ಪದವಿಯಲ್ಲಿ ಎಲ್ಲಾ ವರ್ಷಗಳಲ್ಲಿ/ಸೆಮಿಸ್ಟರ್‌ಗಳಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಡಿಇಡಿ/ಬಿಇಡಿ , ಡಿಇಡಿ/ಬಿಇಡಿ ಸ್ಪೆಷಲ್ ಎಜುಕೇಷನ್ ಪರೀಕ್ಷೆಗಳಲ್ಲಿ ಗಳಿಸಿದ ಒಟ್ಟು ಬಾಹ್ಯ ಅಂಕಗಳ ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾ ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಬಿಎ/ಬಿಎಸ್ಸಿ ತತ್ಸಮಾನ ಪದವಿ ಯಲ್ಲಿನ ಶೇಕಡಾ ಅಂಕಗಳ ಶೇಕಡಾ 35% + ಎರಡು ವರ್ಷಗಳ ಡಿಇಡಿ/ ಬಿಇಡಿ./ ಸ್ಪೆಷಲ್ ಡಿಇಡಿ/ಬಿಇಡಿ ಬಾಹ್ಯ ಅಂಕಗಳ ಶೇಕಡಾ ಅಂಕ ಪರೀಕ್ಷೆಯ ಶೇಕಡಾ ಅಂಕಗಳ <u>15 %</u> + ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡಾ ಅಂಕಗಳ <u>35%</u> ಹಾಗೂ ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಶೇಕಡ ಅಂಕಗಳ <u>15%</u> ವೇಟೇಜ್ (weightage)ಇವುಗಳ ಸರಾಸರಿ ಆಧರಿಸಿ ಮೆರಿಟನ್ನು ಲೆಕ್ಕ ಹಾಕಲಾಗುವುದು.
- ***ಸೂಚನೆ:*** ಸರ್ಕಾರದ ಅನುಮೋದನೆಯಂತೆ ಆಯುಕ್ತರ ಅಧಿಕೃತ ಜ್ಞಾಪನ ಸಂಖ್ಯೆ:ಸಿ3[1]ಪ್ರಾಶಿ:ನೇ:20[ಎ]:ಭಾಗ–3: 2005–06, ದಿನಾಂಕ:03.11.2006ರ ಪ್ರಕಾರ ಟಿ.ಸಿ.ಹೆಚ್., ಮತ್ತು ಡಿ.ಇಡಿ., ಪರೀಕ್ಷೆಗಳ ಅಂತರಿಕ ಮೌಲ್ಯಮಾಪನ ಅಂಕಗಳನ್ನು ಹೊರತುಪಡಿಸಿ ಕೇವಲ ಬಾಹ್ಯ ಅಂಕಗಳನ್ನು ಮಾತ್ರ ಆಯ್ಕೆಗೆ ಪರಿಗಣಿಸಲಾಗುವುದು.

- ಅಭ್ಯರ್ಥಿಯು ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಸೇವೆ ಸಲ್ಲಿಸಿದ್ದಲ್ಲಿ / ಸಲ್ಲಿಸುತ್ತಿದ್ದಲ್ಲಿ ಇವರಿಗೆ ಪೂರ್ಣಗೊಂಡ ಪ್ರತಿ ವರ್ಷದ ಸೇವಾ ಅವಧಿಗೆ 3 ಕೃಪಾಂಕಗಳಂತೆ ಗರಿಷ್ಠ 15 ಕೃಪಾಂಕಗಳ ಮಿತಿಗೆ ಒಳಪಟ್ಟ ಕೃಪಾಂಕಗಳನ್ನು ನೀಡಲಾಗುವುದು.
- ಗೌರವ ಶಿಕ್ಷಕರು / ಅರೆಕಾಲಿಕ ಶಿಕ್ಷಕರಾಗಿದ್ದಲ್ಲಿ ಸಂಬಂಧಿಸಿದ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಸಲ್ಲಿಸಬೇಕು.
- ಸರಾಸರಿ ಶೇಕಡಾವಾರು ಅಂಕಕ್ಕೆ ಅಭ್ಯರ್ಥಿಯ ಕೃಪಾಂಕಗಳನ್ನು ಸೇರಿಸಲಾಗುವುದು. [ಕೃಪಾಂಕಕ್ಕೆ ಅಭ್ಯರ್ಥಿಯು ಅರ್ಹರಿದ್ದಲ್ಲಿ ಮಾತ್ರ] ಈ ಒಟ್ಟು ಅಂಕಗಳನ್ನು ಅರ್ಹತಾ ಅಂಕವೆಂದು ಪರಿಗಣಿಸಲಾಗುತ್ತದೆ.

****** ಅರ್ಜಿ ಭರ್ತಿಮಾಡಲು ಕೊಟ್ಟಿರುವ ಸೂಚನೆಗಳನ್ನು ಗಮನಿಸುವುದು.***

***11] ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು: [ಅ]***

| | | | |
|---|---|---|---|
| *01.* | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | : | ನಮೂನೆ-ಡಿ [ನಿಯಮ-3.ಎ(2)(3)], ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:132:ಎಸ್‌ಎಡಿ:1997, ದಿನಾಂಕ:08.02.2000 |
| *02.* | ಹಿಂದುಳಿದ ಪ್ರವರ್ಗ-1ಕ್ಕೆ ಸೇರಿದ ಅಭ್ಯರ್ಥಿಗಳು. | : | ನಮೂನೆ-ಇ [ನಿಯಮ-3.ಎ(2)(3)], ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:132:ಎಸ್‌ಎಡಿ:1997, ದಿನಾಂಕ:08.02.2000 |
| *03.* | ಹಿಂದುಳಿದ ಪ್ರವರ್ಗ-2.ಎ, 2.ಬಿ, 3.ಎ ಮತ್ತು 3.ಬಿ ಈ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು. | : | ನಮೂನೆ-ಎಫ್ [ನಿಯಮ-3.ಎ(2)(3)] ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:126:ಎಸ್‌ಎಡಿ:1997, ದಿನಾಂಕ:13.02.2003 |

ಅಭ್ಯರ್ಥಿಗಳು ಮೇಲೆ ನಿಗದಿಪಡಿಸಿರುವ ನಿಗದಿತ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರವಿರಬೇಕು ಮತ್ತು ಅವಧಿ ಮೀರಿದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

***[ಆ]*** ಮೇಲೆ ವಿವರಿಸಿರುವ ಪ್ರಕಾರ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ "ಸಮತಳ ಮೀಸಲಾತಿ" [Horizontal reservation] ಅನ್ವಯ ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | | |
|---|---|---|---|
| *01.* | ಮಾಜಿ ಸೈನಿಕರಿಗೆ | ಶೇಕಡಾ-10 | ಕರ್ನಾಟಕ ಸಿವಿಲ್ ಸರ್ವೀಸಸ್ [ಜನರಲ್ ರೆಕ್ರೂಟ್‌ಮೆಂಟ್] ರೂಲ್ಸ್ 1977ರ ನಿಯಮ-9[1]ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *02.* | ಅಂಗವಿಕಲರಿಗೆ | ಶೇಕಡಾ-5 | ಕರ್ನಾಟಕ ಸಿವಿಲ್ ಸರ್ವೀಸಸ್ [ಜನರಲ್ ರೆಕ್ರೂಟ್‌ಮೆಂಟ್] ರೂಲ್ಸ್ 1977ರ ನಿಯಮ-9[1][ಎ]ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *03.* | ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದವರ ಅಭ್ಯರ್ಥಿಗಳಿಗಾಗಿ | ಶೇಕಡಾ-5 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:23:ಎಸ್‌ಆರ್‌ಆರ್:1999 ದಿನಾಂಕ:23.11.2000 ಮತ್ತು ಸಂಖ್ಯದ:ಸಿಆಸುಇ:97:ಸೇನಿನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *04.* | ಗ್ರಾಮೀಣ ಅಭ್ಯರ್ಥಿಗಳಿಗೆ | ಶೇಕಡಾ-25 | 2000ದ ಕರ್ನಾಟಕ ಗ್ರಾಮಿಣ ಅಭ್ಯರ್ಥಿಗಳಿಗಾಗಿ [ರಾಜ್ಯ ಸಿವಿಲ್ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿ ವಿದೇಯಕ] ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನಿನಿ:2002 ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *05.* | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇಕಡಾ-5 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:71:ಎಸ್‌ಆರ್‌ಆರ್:2001 ದಿ:24.10.2002 ಮತ್ತು ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *06.* | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡಾ-50 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:41:ಎಸ್‌ಆರ್‌ಇ: 2001, ದಿನಾಂಕ:09.08.2001ರ ಪ್ರಕಾರ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರಲಾಗಿದ್ದು, ಮಹಿಳೆಯರಿಗೆ ಪ್ರತಿ ಗುಂಪಿನಲ್ಲೂ ಶೇಕಡಾ 50% ಹುದ್ದೆಗಳನ್ನು ಮೀಸಲಿಸಲಾಗಿದೆ. ಮತ್ತು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿನಾಂಕ:01.04.2008. |

***12] ಮಾಜಿ ಸೈನಿಕ ಅಭ್ಯರ್ಥಿಗಳು:***

"ಮಾಜಿ ಸೈನಿಕ"ರಿಗಾಗಿ ಮೀಸಲಿಟ್ಟ ಖಾಲಿ ಹುದ್ದೆಗಳನ್ನು ಮಿಲಿಟರಿ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿಗಳಿಂದ ಮತ್ತು ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರಿಂದ ನೇಮಕಾತಿ ಮೂಲಕ ತುಂಬಲಾಗುತ್ತದೆ.

ಆನ್‌ಲೈನ್ ಮೂಲಕವೇ ಪಡೆಯತಕ್ಕದ್ದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಹಾಜರಾದ ಮಾತ್ರಕ್ಕೆ ಅಭ್ಯರ್ಥಿ ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಭ್ಯರ್ಥಿಯು ಇದರ ಜೊತೆಗೆ ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿ ಹೊಂದಿರತಕ್ಕದ್ದು.

*02.* ಅರ್ಜಿಗಳನ್ನು ದಿನಾಂಕ: 27-04-2015ರೊಳಗೆ ಆನ್‌ಲೈನ್ ಮೂಲಕವೇ ಸಲ್ಲಿಸಬೇಕು. ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ. ಅಂಚೆ ಮೂಲಕ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

*03.* ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಸಮಯಕ್ಕೆ ***ಎಲ್ಲಾ ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದ ಮೊದಲೇ ಪಡೆದಿರಬೇಕು.*** ಆದರೆ, ತಾತ್ಕಾಲಿಕ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಆಯ್ಕೆ ಹೊಂದಿದ್ದಲ್ಲಿ ಅಥವಾ ಆಕ್ಷೇಪಣೆ ನೀಡುವ ಹಂತದಲ್ಲಿ ಎಲ್ಲಾ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಆಯ್ಕೆ ಪ್ರಾಧಿಕಾರಕ್ಕೆ ಸಲ್ಲಿಸಬೇಕು.

*04.* ಅಭ್ಯರ್ಥಿಗಳು ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ ಭಾವಚಿತ್ರವನ್ನು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿ ನಮೂನೆಯಲ್ಲಿ ನಿಗದಿಪಡಿಸಿರುವ ಸ್ಥಳದಲ್ಲಿಯೇ ಸ್ಕ್ಯಾನ್ ಮಾಡಿ ಸಲ್ಲಿಸುವುದು.

*05.* ಪ್ರಮಾಣ ಪತ್ರಗಳು ಪರಿಶೀಲನೆಯ ಸಮಯದಲ್ಲಿ ***ಸುಳ್ಳು ದಾಖಲೆ ಅಥವಾ ಸುಳ್ಳು ಮಾಹಿತಿ ನೀಡಿರುವುದು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಯಾಗುವ ಅವಕಾಶವನ್ನು ಕಳೆದುಕೊಳ್ಳುತ್ತಾರೆ.***

*06.* ಆಯ್ಕೆಪಟ್ಟಿಯಲ್ಲಿ ಸೇರ್ಪಡೆಯಾದ ಮಾತ್ರಕ್ಕೆ ಅಭ್ಯರ್ಥಿಗಳ ನೇಮಕಾತಿಗೆ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.

*07.* ಮೇಲಿನ ನೇಮಕಾತಿಗಳು ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

*08.* ಯಾವುದೇ ಹಂತದಲ್ಲಿ ತಪ್ಪು ಮಾಹಿತಿಯ ಆಧಾರದ ಮೇಲೆ ಆಯ್ಕೆಯಾದ ಅಥವಾ ಅನರ್ಹತೆಯ ಕಾರಣಗಳಿಗಾಗಿ ಅಭ್ಯರ್ಥಿಯ ಹೆಸರನ್ನು ಪಟ್ಟಿಯಿಂದ ಕೈಬಿಡುವ ಅಥವಾ ನೇಮಕಾತಿ ಆದೇಶವನ್ನು ರದ್ದುಗೊಳಿಸುವ ಅಧಿಕಾರವನ್ನು ಇಲಾಖೆಯು ಕಾಯ್ದಿರಿಸಿಕೊಂಡಿರುತ್ತದೆ.

*09.* ಆಯ್ಕೆಯಾದ ಅಭ್ಯರ್ಥಿಯು ತಾನು ನೇಮಕಗೊಂಡ ನೇಮಕಾತಿ/ಜೇಷ್ಠತಾ ಘಟಕ [ತಾಲ್ಲೂಕು]ದಲ್ಲಿ ಕನಿಷ್ಠ 10 ವರ್ಷಗಳ ಸೇವೆಯನ್ನು ಪೂರೈಸಿರಬೇಕು. ಇಲ್ಲವಾದಲ್ಲಿ ಘಟಕದ ಹೊರಗಿನ ವರ್ಗಾವಣೆಗೆ ಅವಕಾಶವಿರುವುದಿಲ್ಲ. ಈ ಷರತ್ತಿಗೆ ಬದ್ಧರಾಗಿವರು ಮಾತ್ರ ನೇಮಕಾತಿಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು .

*10.* ಅಭ್ಯರ್ಥಿಗಳು ಅವರ ಅರ್ಜಿಗಳಲ್ಲಿ ಭರ್ತಿ ಮಾಡಿರುವ ಮಾಹಿತಿಗಳ ಆಧಾರದ ಮೇಲೆ ಅವರಿಗೆ ಸ್ಪರ್ಧಾತ್ಮಕ ಪರೀಕ್ಷೆ ಬರೆಯಲು ಪ್ರವೇಶ ಪತ್ರಗಳನ್ನು ನೀಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಅಂಕಗಳ ಮಾಹಿತಿ, ಮೀಸಲಾತಿ, ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದ ಅಥವಾ ತಪ್ಪು ಮಾಹಿತಿ ನೀಡಿದ ಸಂದರ್ಭಗಳಲ್ಲಿ ಮುಂದಿನ ಆಗುಹೋಗುಗಳಿಗೆ ಅಭ್ಯರ್ಥಿಗಳೇ ಜವಾಬ್ದಾರರು.

*11.* ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಹಾಗೂ ವಯೋಮಿತಿ ಸಡಿಲಿಕೆ ಇತ್ಯಾದಿಗಳಿಗೆ ಸಂಬಂಧಿತ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು. ಈ ಬಗ್ಗೆ ಅನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಮನವಿ ಪತ್ರಗಳನ್ನು ಪುರಸ್ಕರಿಸಲಾಗುವುದಿಲ್ಲ.

*12.* ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

*13.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವಾಗ ಪ್ರವೇಶ ಪತ್ರ, ಸ್ವೀಕೃತಿ ಪತ್ರ ಹಾಗೂ ಇತರೆ ದಾಖಲೆಗಳನ್ನು ಆಯ್ಕೆ ಪ್ರಕ್ರಿಯೆ ಮುಗಿಯುವ ತನಕ ಸುರಕ್ಷಿತವಾಗಿ ಇಟ್ಟುಕೊಳ್ಳತಕ್ಕದ್ದು. ಈ ಅರ್ಜಿಯನ್ನು ಭರ್ತಿ ಮಾಡುವ ವಿಧಾನ, ಮೀಸಲಾತಿ ಪ್ರಮಾಣ ಪತ್ರಗಳ ನಮೂನೆ, ಮೀಸಲಾತಿಯ [Horizontal and vertical Reservations] ವಿವರ ಹಾಗೂ ಸರ್ಕಾರಿ ಆದೇಶಗಳ ಬಗ್ಗೆ ಮಾಹಿತಿ ನೀಡಲಾಗಿದ್ದು, ಅಭ್ಯರ್ಥಿಗಳು ಅವುಗಳನ್ನು ಗಮನವಿಟ್ಟು ಓದಿಕೊಳ್ಳತಕ್ಕದ್ದು.

*14.* ದುರ್ನಡತೆ: ಒಬ್ಬ ಅಭ್ಯರ್ಥಿಯು ನಕಲು ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು

ಅಥವಾ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯ್ಕೆ ಪ್ರಾಧಿಕಾರದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದೇ ಅಲ್ಲದೇ, ಆಯ್ಕೆ ಪ್ರಾಧಿಕಾರವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

*15.* ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. [ಅರ್ಜಿಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ] ನಮೂದಿಸಲು ಬಿಟ್ಟುಹೋಗಿದ್ದ ಯಾವುದೇ ಮಾಹಿತಿಯನ್ನು ಹೊಸದಾಗಿ ದಾಖಲಿಸಲು ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೇ ತಿರಸ್ಕರಿಸಲಾಗುವುದು.

*16.* ಅರ್ಜಿ ನಮೂನೆ, ಉತ್ತರ ಪತ್ರಿಕೆ, ಪ್ರವೇಶ ಪತ್ರಗಳ ನಿಗದಿತ ಸ್ಥಳಗಳಲ್ಲಿ ಎಡಗೈ ಹೆಬ್ಬೆಟ್ಟು ಗುರುತನ್ನು ಸ್ಪಷ್ಟವಾಗಿ ಹಾಕಬೇಕು. ಎಡಗೈ ಹೆಬ್ಬೆರಳ ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.

*17.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ ಪ್ರವೇಶ ಪತ್ರದ ಪ್ರತಿಯನ್ನು ದ್ವಿಪ್ರತಿಯಲ್ಲಿ ಡೌನ್‌ಲೋಡ್ ಮಾಡಿಕೊಂಡು ಆ ಪ್ರತಿಗಳಲ್ಲಿ ಒಂದೇ ಮಾದರಿಯ ಇತ್ತೀಚಿನ ತಲಾ ಒಂದು ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು.

*18.* ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಈ ಸಂಬಂಧ ಆಯ್ಕೆ ಪ್ರಾಧಿಕಾರಿ / ನೇಮಕಾತಿ ಪ್ರಾಧಿಕಾರಿಗಳು ನೀಡುವ ಸೂಚನೆಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ನಲ್ಲಿ ಅವಲೋಕಿಸುವುದು.

*19.* ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗೆ ನಡೆಸಲಾಗುವ ಸ್ಪರ್ಧಾತ್ಮಕ ಪರೀಕ್ಷೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಕಡ್ಡಾಯವಾಗಿ 10ನೇ ತರಗತಿಯ ಪಠ್ಯದ ಆಂಗ್ಲ ಭಾಷೆಯ ಜ್ಞಾನ ಹಾಗೂ ಸಾಮಾನ್ಯ ಕಂಪೂಟರ್ ಜ್ಞಾನವನ್ನು ಫಂಡಮೆಂಟಲ್ಸ್, ಎಂ.ಎಸ್.ವಿನ್ಡೋಸ್, ಎಂ.ಎಸ್.ವರ್ಡ್, ಎಂ.ಎಸ್.ಎಕ್ಸ್‌ಲ್, ಫವರ್ ಪಾಯಿಂಟ್ ಬಗ್ಗೆ ಹೊಂದಿರತಕ್ಕದ್ದು.

ಹೆಚ್ಚಿನ ವಿವರಗಳಿಗೆ ಆನ್‌ಲೈನ್‌ನಲ್ಲಿ ನೀಡಿರುವ ಸೂಚನೆಗಳನ್ನು ಗಮನಿಸಬೇಕು. ಹಾಗೂ ಯಾವುದೇ ಹೆಚ್ಚಿನ ಸ್ಪಷ್ಟೀಕರಣಕ್ಕೆ ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರ ಕಛೇರಿಯನ್ನು ಸಂಪರ್ಕಿಸಬಹುದು.

ಸಹಿ:–

*ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪನಿರ್ದೇಶಕರು,*

ಸಾರ್ವಜನಿಕ ಶಿಕ್ಷಣ ಇಲಾಖೆ, ***ದಕ್ಷಿಣ ಕನ್ನಡ ಜಿಲ್ಲೆ***

ಆಯ್ಕೆ ಪ್ರಾಧಿಕಾರಿಗಳು ಹಾಗೂ ಉಪನಿರ್ದೇಶಕರು(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ,

1–5ನೇ ತರಗತಿ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಪ್ರಕಟಿಸಲಾಸದ ಖಾಲಿ ಹುದ್ದೆಗಳ ವರ್ಗೀಕರಣ ವಿಷಯ:– ಸಾಮಾನ್ಯ ಕನ್ನಡ

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಬಂಟ್ವಾಳ | ಇಲ್ಲ | 13 | 13 | 1 | ಇತರೆ | 1 | | | | | | | 3 | 4 |
| | | | | 2 | ಗ್ರಾಮೀಣ ಅ | 1 | | | 1 | | | | 2 | 4 |
| | | | | 3 | ಅಂಗವಿಕಲ | | | | | 1* | | 1* | 1* | 3 |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | 1 | | | 1 | | | | | 2 |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 3 | | | 2 | 1 | | 1 | 6 | 13 |

* 2ಬಿ ಮತ್ತು 3 ಬಿ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದುಗಳು ದೃಷ್ಟಿಮಾಂಧ್ಯ ಹಾಗೂ ಸಾಮಾನ್ಯ ವರ್ಗೀಕರಣದಲ್ಲಿ ಬರುವ ಬಿಂದು ಶ್ರವಣದೋಷದ ಅಭ್ಯರ್ಥಿಗಳಿಗೆ ಮೀಸಲು.

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಬೆಳ್ತಂಗಡಿ | ಇಲ್ಲ | 19 | 19 | 1 | ಇತರೆ | | | 1 | 1 | 1 | | 1 | 4 | 8 |
| | | | | 2 | ಗ್ರಾಮೀಣ ಅ | 1 | | | 1 | | | | 3 | 5 |
| | | | | 3 | ಅಂಗವಿಕಲ | | 1* | | | | 1 * | | | 2 |
| | | | | 4 | ಮಾಜಿ ಸೈನಿಕ | | | | | | | | 1 | 1 |
| | | | | 5 | ಕ.ಮಾ.ಅಭ್ಯರ್ಥಿ | | | | | | | | 1 | 1 |
| | | | | 6 | ಯೋ.ನಿ.ರಾ.ಅ | 1 | | | 1 | | | | | 2 |
| ಒಟ್ಟು | | | | | | 2 | 1 | 1 | 3 | 1 | 1 | 1 | 9 | 19 |

* ಪ.ಪಂ ಮತ್ತು 3 ಎ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದುಗಳು ದೃಷ್ಟಿಮಾಂಧ್ಯ ಅಭ್ಯರ್ಥಿಗಳಿಗೆ ಮೀಸಲು.

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಮೂಡಬಿದ್ರೆ | ಇಲ್ಲ | 2 | 2 | 1 | ಇತರೆ | | | | 1 | | | | | **1** |
| | | | | 2 | ಗ್ರಾಮೀಣ ಅ | | | | | | | | | |
| | | | | 3 | ಅಂಗವಿಕಲ | | | | | | | | 1 * | **1** |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿ.ರಾ.ಅ | | | | | | | | | |
| **ಒಟ್ಟು** | | | | | | | | | **1** | | | | **1** | **2** |
| *** ಸಾಮಾನ್ಯ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದು ದೃಷ್ಟಿಮಾಂಧ್ಯ ಅಭ್ಯರ್ಥಿಗಳಿಗೆ ಮೀಸಲು.** | | | | | | | | | | | | | | |

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಪುತ್ತೂರು | ಇಲ್ಲ | 6 | 6 | 1 | ಇತರೆ | | | | 1 | | | 1 | 2 | **4** |
| | | | | 2 | ಗ್ರಾಮೀಣ ಅ | | | | | | | | 1 | **1** |
| | | | | 3 | ಅಂಗವಿಕಲ | | | | | | 1 * | | | **1** |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | | | | 1 | | 1 | 1 | 3 | **6** |
| *** 3ಎ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದು ದೃಷ್ಟಿಮಾಂಧ್ಯ ಅಭ್ಯರ್ಥಿಗಳಿಗೆ ಮೀಸಲು.** | | | | | | | | | | | | | | |

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಸುಳ್ಯ | ಇಲ್ಲ | 20 | 20 | 1 | ಇತರೆ | 1 | | | 1 | | | | 5 | **7** |
| | | | | 2 | ಗ್ರಾಮೀಣ ಅ | 1 | 1 | 1 | 1 | 1 | | 1 | 3 | **9** |
| | | | | 3 | ಅಂಗವಿಕಲ | | | | | | | | | |
| | | | | 4 | ಮಾಜಿ ಸೈನಿಕ | 1 | | | 1 | | | | 1 | **3** |
| | | | | 5 | ಕ.ಮಾ.ಅಭ್ಯರ್ಥಿ | | | | | | | | 1 | **1** |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 3 | 1 | 1 | 3 | 1 | | 1 | 10 | **20** |

ಆಯ್ಕೆ ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು(ಆಡಳಿತ)

ಸಾ.ಶಿ.ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ

ಆಯ್ಕೆ ಪ್ರಾಧಿಕಾರಿಗಳು ಹಾಗೂ ಉಪನಿರ್ದೇಶಕರು(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ,

6–8ನೇ ತರಗತಿ ಸರ್ಕಾರಿ ಉನ್ನತೀಕರಿಸಿದ ಹಿರಿಯ ಪ್ರಾಥಮಿಕ ಶಾಲಾ ಪದವೀಧರ ಸಹ ಶಿಕ್ಷಕರ ನೇಮಕಾತಿಗಾಗಿ ಪ್ರಕಟಿಸಲಾಸದ ಖಾಲಿ ಹುದ್ದೆಗಳ ವರ್ಗೀಕರಂ

ವಿಷಯ:– ಸಾಮಾನ್ಯ ಕನ್ನಡ

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಬಂಟ್ವಾಳ | ಶೂನ್ಯ | 33 | 33 | 1 | ಇತರೆ | 3 | 1 | 2 | 3 | 1 | 1 | 1 | 8 | **20** |
| | | | | 2 | ಗ್ರಾಮೀಣ ಅ | 2 | | | 1 | | | | 5 | **8** |
| | | | | 3 | ಅಂಗವಿಕಲ | 1 * | | | 1 * | | | | 1 * | **3** |
| | | | | 4 | ಮಾಜಿ ಸೈನಿಕ | | | | | | | | 1 | **1** |
| | | | | 5 | ಕ.ಮಾ.ಅಭ್ಯರ್ಥಿ | | | | | | | | 1 | **1** |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 6 | 1 | 2 | 5 | 1 | 1 | 1 | 16 | **33** |
| * ಪ.ಜಾ, 2ಎ ಮತ್ತು ಸಾಮಾನ್ಯ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದುಗಳು ದೃಷ್ಟಿಮಾಂಧ್ಯ ಅಭ್ಯರ್ಥಿಗಳಿಗೆ ಮೀಸಲು. | | | | | | | | | | | | | | |

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಬೆಳ್ತಂಗಡಿ | ಶೂನ್ಯ | 28 | 28 | 1 | ಇತರೆ | 3 | 1 | 1 | 2 | 1 | 1 | 1 | 7 | **17** |
| | | | | 2 | ಗ್ರಾಮೀಣ ಅ | 1 | | | 1 | | | | 4 | **6** |
| | | | | 3 | ಅಂಗವಿಕಲ | 1 * | | | 1 * | | | | 1 * | **3** |
| | | | | 4 | ಮಾಜಿ ಸೈನಿಕ | | | | | | | | 1 | **1** |
| | | | | 5 | ಕ.ಮಾ.ಅಭ್ಯರ್ಥಿ | | | | | | | | 1 | **1** |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 5 | 1 | 1 | 4 | 1 | 1 | 1 | 14 | **28** |
| * ಪ.ಜಾ, 2ಎ ಮತ್ತು ಸಾಮಾನ್ಯ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದುಗಳು ದೃಷ್ಟಿಮಾಂಧ್ಯ ಅಭ್ಯರ್ಥಿಗಳಿಗೆ ಮೀಸಲು. | | | | | | | | | | | | | | |

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಮಂ. ಉತ್ತರ ವಲಯ | ಇಲ್ಲ | 5 | 5 | 1 | ಇತರೆ | 1 | 1 | 1 | | | | | 2 | 5 |
| | | | | 2 | ಗ್ರಾಮೀಣ ಅ | | | | | | | | | |
| | | | | 3 | ಅಂಗವಿಕಲ | | | | | | | | | |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 1 | 1 | 1 | | | | | 2 | 5 |

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಮಂ ದಕ್ಷಿಣ ವಲಯ | ಇಲ್ಲ | 13 | 13 | 1 | ಇತರೆ | 2 | 1 | 1 | 2 | 1 | | | 3 | 10 |
| | | | | 2 | ಗ್ರಾಮೀಣ ಅ | | | | | | | | 2 | 2 |
| | | | | 3 | ಅಂಗವಿಕಲ | | | | | | | | 1 * | 1 |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 2 | 1 | 1 | 2 | 1 | | | 6 | 13 |

* ಸಾಮಾನ್ಯ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದು ದೃಷ್ಟಿಮಾಂದ್ಯ ಅಭ್ಯರ್ಥಿಗಳಿಗೆ ಮೀಸಲು.

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಮೂಡಬಿದ್ರಿ | ಇಲ್ಲ | 5 | 5 | 1 | ಇತರೆ | 1 | 1 | 1 | | | | | 2 | 5 |
| | | | | 2 | ಗ್ರಾಮೀಣ ಅ | | | | | | | | | |
| | | | | 3 | ಅಂಗವಿಕಲ | | | | | | | | | |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 1 | 1 | 1 | | | | | 2 | 5 |
| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಪುತ್ತೂರು | ಇಲ್ಲ | 25 | 25 | 1 | ಇತರೆ | 2 | 1 | 1 | 2 | 1 | 1 | 1 | 7 | 16 |
| | | | | 2 | ಗ್ರಾಮೀಣ ಅ | 1 | | | 1 | | | | 3 | 5 |
| | | | | 3 | ಅಂಗವಿಕಲ | 1 * | | | 1 * | | | | 1 * | 3 |
| | | | | 4 | ಮಾಜಿ ಸೈನಿಕ | | | | | | | | 1 | 1 |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 4 | 1 | 1 | 4 | 1 | 1 | 1 | 12 | 25 |

* ಪ.ಜಾ, 2ಎ ಮತ್ತು ಸಾಮಾನ್ಯ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದುಗಳು ದೃಷ್ಟಿಮಾಂದ್ಯ ಅಭ್ಯರ್ಥಿಗಳಿಗೆ ಮೀಸಲು.

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಸುಳ್ಯ | ಇಲ್ಲ | 11 | 11 | 1 | ಇತರೆ | 2 | 1 | 1 | 1 | 1 | | | 3 | 9 |
| | | | | 2 | ಗ್ರಾಮೀಣ ಅ | | | | | | | | 1 | 1 |
| | | | | 3 | ಅಂಗವಿಕಲ | | | | | | | | 1 * | 1 |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 2 | 1 | 1 | 1 | 1 | | | 5 | 11 |
| * ಸಾಮಾನ್ಯ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದು ದೃಷ್ಟಿಮಾಂದ್ಯ ಅಭ್ಯರ್ಥಿಗಳಿಗೆ ಮೀಸಲು. | | | | | | | | | | | | | | |

ಆಯ್ಕೆ ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು(ಆಡಳಿತ)

ಸಾ.ಶಿ.ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ

**6–8ನೇ ತರಗತಿ ಸರ್ಕಾರಿ ಉನ್ನತೀಕರಿಸಿದ ಹಿರಿಯ ಪ್ರಾಥಮಿಕ ಶಾಲಾ ಪದವೀಧರ ಸಹ ಶಿಕ್ಷಕರ ನೇಮಕಾತಿಗಾಗಿ ಪ್ರಕಟಿಸಲಾಸದ ಖಾಲಿ ಹುದ್ದೆಗಳ ವರ್ಗೀಕರಣ ವಿಷಯ:– ಆಂಗ್ಲ**

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಬಂಟ್ವಾಳ | ಇಲ್ಲ | 32 | 32 | 1 | ಇತರೆ | 3 | 1 | 2 | 3 | 1 | 1 | 1 | 8 | 20 |
| | | | | 2 | ಗ್ರಾಮೀಣ ಅ | 1 | | | 1 | | | | 5 | 7 |
| | | | | 3 | ಅಂಗವಿಕಲ | 1 * | | | 1 * | | | | 1 * | 3 |
| | | | | 4 | ಮಾಜಿ ಸೈನಿಕ | | | | | | | | 1 | 1 |
| | | | | 5 | ಕ.ಮಾ.ಅಭ್ಯರ್ಥಿ | | | | | | | | 1 | 1 |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 5 | 1 | 2 | 5 | 1 | 1 | 1 | 16 | 32 |

* ಪ.ಜಾ, 2ಎ ಮತ್ತು ಸಾಮಾನ್ಯ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದುಗಳು ದೃಷ್ಟಿಮಾಂಧ್ಯ ಅಭ್ಯರ್ಥಿಗಳಿಗೆ ಮೀಸಲು.

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಬೆಳ್ತಂಗಡಿ | ಇಲ್ಲ | 28 | 28 | 1 | ಇತರೆ | 3 | 1 | 1 | 2 | 1 | 1 | 1 | 7 | 17 |
| | | | | 2 | ಗ್ರಾಮೀಣ ಅ | 1 | | | 1 | | | | 4 | 6 |
| | | | | 3 | ಅಂಗವಿಕಲ | 1 * | | | 1 * | | | | 1 * | 3 |
| | | | | 4 | ಮಾಜಿ ಸೈನಿಕ | | | | | | | | 1 | 1 |
| | | | | 5 | ಕ.ಮಾ.ಅಭ್ಯರ್ಥಿ | | | | | | | | 1 | 1 |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 5 | 1 | 1 | 4 | 1 | 1 | 1 | 14 | 28 |

* ಪ.ಜಾ, 2ಎ ಮತ್ತು ಸಾಮಾನ್ಯ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದುಗಳು ದೃಷ್ಟಿಮಾಂಧ್ಯ ಅಭ್ಯರ್ಥಿಗಳಿಗೆ ಮೀಸಲು.

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಮಂ. ಉತ್ತರ ವಲಯ | ಇಲ್ಲ | 5 | 5 | 1 | ಇತರೆ | 1 | 1 | 1 | | | | | 2 | 5 |
| | | | | 2 | ಗ್ರಾಮೀಣ ಅ | | | | | | | | | |
| | | | | 3 | ಅಂಗವಿಕಲ | | | | | | | | | |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 1 | 1 | 1 | | | | | 2 | 5 |

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಮಂ ದಕ್ಷಿಣ ವಲಯ | ಇಲ್ಲ | 13 | 13 | 1 | ಇತರೆ | 2 | 1 | 1 | 2 | 1 | | | 3 | 10 |
| | | | | 2 | ಗ್ರಾಮೀಣ ಅ | | | | | | | | 2 | 2 |
| | | | | 3 | ಅಂಗವಿಕಲ | | | | | | | | 1 * | 1 |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 2 | 1 | 1 | 2 | 1 | | | 6 | 13 |

* ಸಾಮಾನ್ಯ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದು ದೃಷ್ಟಿಮಾಂದ್ಯ ಅಭ್ಯರ್ಥಿಗಳಿಗೆ ಮೀಸಲು.

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಮೂಡಬಿದ್ರೆ | ಇಲ್ಲ | 4 | 4 | 1 | ಇತರೆ | 1 | 1 | | | | | | 2 | 4 |
| | | | | 2 | ಗ್ರಾಮೀಣ ಅ | | | | | | | | | |
| | | | | 3 | ಅಂಗವಿಕಲ | | | | | | | | | |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 1 | 1 | | | | | | 2 | 4 |

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಪುತ್ತೂರು | ಇಲ್ಲ | 26 | 26 | 1 | ಇತರೆ | 2 | 1 | 1 | 2 | 1 | 1 | 1 | 7 | 16 |
| | | | | 2 | ಗ್ರಾಮೀಣ ಅ | 1 | | | 1 | | | | 4 | 6 |
| | | | | 3 | ಅಂಗವಿಕಲ | 1 * | | | 1 * | | | | 1 * | 3 |
| | | | | 4 | ಮಾಜಿ ಸೈನಿಕ | | | | | | | | 1 | 1 |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 4 | 1 | 1 | 4 | 1 | 1 | 1 | 13 | 26 |
| * ಪ.ಜಾ, 2ಎ ಮತ್ತು ಸಾಮಾನ್ಯ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದುಗಳು ದೃಷ್ಟಿಮಾಂದ್ಯ ಅಭ್ಯರ್ಥಿಗಳಿಗೆ ಮೀಸಲು. | | | | | | | | | | | | | | |

| ತಾಲೂಕು/ ಬ್ಲಾಕ್ ಹೆಸರು | ಬ್ಯಾಕ್‌ಲಾಗ್ ಹುದ್ದೆಗಳು | ಪ್ರಕಟಿತ ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | | ವರ್ಗೀಕರಣ | ಪ್ರವರ್ಗವಾರು ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|---|---|---|
| | | | | | | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2ಎ | 2ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಸುಳ್ಯ | ಇಲ್ಲ | 12 | 12 | 1 | ಇತರೆ | 2 | 1 | 1 | 1 | 1 | | | 3 | 9 |
| | | | | 2 | ಗ್ರಾಮೀಣ ಅ | | | | | | | | 2 | 2 |
| | | | | 3 | ಅಂಗವಿಕಲ | | | | | | | | 1 * | 1 |
| | | | | 4 | ಮಾಜಿ ಸೈನಿಕ | | | | | | | | | |
| | | | | 5 | ಕ.ಮಾ.ಅಭ್ಯರ್ಥಿ | | | | | | | | | |
| | | | | 6 | ಯೋ.ನಿ.ರಾ.ಅ | | | | | | | | | |
| ಒಟ್ಟು | | | | | | 2 | 1 | 1 | 1 | 1 | | | 6 | 12 |
| * ಸಾಮಾನ್ಯ ವರ್ಗೀಕರಣದಲ್ಲಿ ಬರುವ ಅಂಗವಿಕಲ ಬಿಂದು ದೃಷ್ಟಿಮಾಂದ್ಯ ಅಭ್ಯರ್ಥಿಗಳಿಗೆ ಮೀಸಲು. | | | | | | | | | | | | | | |

ಆಯ್ಕೆ ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು(ಆಡಳಿತ)

ಸಾ.ಶಿ.ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ

PR-64
SC-50

## ಸಾರ್ವಜನಿಕ ಶಿಕ್ಷಣ ಇಲಾಖೆ,
## ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ, ಯಾದಗಿರಿ ಜಿಲ್ಲೆ ಯಾದಗಿರಿ
# ನೇಮಕಾತಿ ಅಧಿಸೂಚನೆ

**ಸಂಖ್ಯೆ:ಇ1ಬಿ/ ಆಡಳಿತ/ಪ್ರಾಶಾಶಿನೇ/19/2014-15, ದಿನಾಂಕ:23ನೇ ಮಾರ್ಚ್ 2015**

***ವಿಷಯ***: 2014-15ನೇ ಸಾಲಿನಲ್ಲಿ 1-5, ಹಾಗೂ 6-8ನೇ ತರಗತಿ ಸರ್ಕಾರಿ ಪ್ರಾಥಮಿಕ ಶಾಲಾ ಸಹಶಿಕ್ಷಕರ ಮತ್ತು ಸಹಶಿಕ್ಷಕಿ ವೃಂದದ ಹುದ್ದೆಗಳನ್ನು ನೇರ ನೇಮಕಾತಿಯಿಂದ ಜಿಲ್ಲಾ ಮಟ್ಟದ [ಸಂಯುಕ್ತ ಸ್ಪರ್ಧಾತ್ಮಕ] ಪರೀಕ್ಷೆಯ ಮೂಲಕ ಭರ್ತಿ ಮಾಡುವ ಬಗ್ಗೆ.

***ಉಲ್ಲೇಖ***: 1.ಸರ್ಕಾರದ ಅಧಿಕೃತ ಪ್ರಕಟಣೆ ಸಂ:ಇಡಿ:ಡಿಪಿಎಆರ್:41:ಎಸ್ಆರ್ಇ:2001, ದಿನಾಂಕ:09.08.2001.

2] ಸರ್ಕಾರಿ ಆದೇಶ ಸಂ:ಸಿಆಸುಇ:08:ಸಹಿಮ:1995, ದಿನಾಂಕ:20.06.1995.
3] ಸರ್ಕಾರಿ ಆದೇಶ ಸಂ:ಸಿಆಸುಇ:97:ಸನೆನಿ:2002 ದಿನಾಂಕ:22.11.2002.
4] ಸರ್ಕಾರಿ ಆದೇಶ ಸಂ:ಸಿಆಸುಇ:53:ಸೇನೇನಿ:2007, ದಿನಾಂಕ:04.01.2008.
5] ಸರ್ಕಾರಿ ಆದೇಶ ಸಂ:ಇಡಿ:21:ಯೋಯೋಕ:2010, ದಿನಾಂಕ:02.11.2012.
6] ಸರ್ಕಾರಿ ಆದೇಶ ಸಂ:ಇಡಿ:238:ಪಿಬಿಐ:2012, ದಿನಾಂಕ:21.01.2013.
7] ಸರ್ಕಾರಿ ಆದೇಶ ಸಂ:ಸಿಆಸುಇ:50:ಎಸ್.ಆರ್.ಆರ್.:2007, ದಿನಾಂಕ:26.07.2011
8] ಸರ್ಕಾರಿ ಆದೇಶ ಸಂ :ಸಿಆಸುಇ:54:ಎಸ್.ಆರ್.ಆರ್.:2012,ದಿನಾಂಕ:07.08.2012
9] ಸರ್ಕಾರಿ ಆದೇಶ ಸಂ :ಸಿಆಸುಇ: 43: ಹೆಚ್‌ಕೆಸಿ 2013,ದಿನಾಂಕ:29.01.2014
10] ಸರ್ಕಾರಿ ಆದೇಶ ಸಂ : ಸಿಆಸುಇ 33 ಹೈಕಲು 2014,ದಿನಾಂಕ: 10.04.2014
11] ಸರ್ಕಾರಿ ಆದೇಶ ಸಂ:ಇಡಿ:626:ಪಿಬಿಎಸ್:2014, ದಿನಾಂಕ:31.01.2015

ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಪರೀಕ್ಷೆ ಮೂಲಕ ಅಂದರೆ ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ [ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್] [ರೆಕ್ರೂಟ್‌ಮೆಂಟ್][ಅಮೆಂಡ್‌ಮೆಂಟ್]ರೂಲ್ಸ್-2001[ಸಂಖ್ಯೆ:ಡಿಪಿಎಆರ್:41:ಎಸ್ಆರ್ಇ:2001,ದಿನಾಂಕ: 09.08.2001]ರ ಹಾಗೂ ಇಡಿ:626:ಪಿಬಿಎಸ್:2014, ದಿನಾಂಕ:31.01.2015 ನಿಯಮಗಳನ್ವಯ ಆಯ್ಕೆ ಮಾಡಲು ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ. ನೇಮಕಾತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನ ಅಂದರೆ ದಿನಾಂಕ: 27-04-2015 ರಂದು ಅರ್ಹರಾಗಿರುವ ಹಾಗೂ ಶಿಕ್ಷಕರ ಅರ್ಹತಾ ಪರೀಕ್ಷೆ (ಟಿ.ಇ.ಟಿ)ಯಲ್ಲಿ ಅರ್ಹತೆಗಳಿಸಿ ಅರ್ಹತಾ ಪ್ರಮಾಣ ಪತ್ರವನ್ನು ಪಡೆದಿರುವ ಅಭ್ಯರ್ಥಿಗಳಿಂದ ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ ಆನ್‌ಲೈನ್ ಮೂಲಕ ಅರ್ಜಿಗಳನ್ನು ಕರೆಯಲಾಗಿದೆ. ಇತರೆ ಬೇರೆ ಯಾವುದೇ ನಮೂನೆಯಲ್ಲಿ ಸಲ್ಲಿಸುವ ಅರ್ಜಿಗಳನ್ನು ನೇಮಕಾತಿಗಾಗಿ ಪರಿಗಣಿಸಲಾಗುವುದಿಲ್ಲ.

ಆಯ್ಕೆ ಮಾಡಲು ಉಲ್ಲೇಖದಲ್ಲಿ ನಮೂದಿಸಿರುವ ನೇಮಕಾತಿ ನಿಯಮಗಳು, ಮೀಸಲಾತಿ ನಿಯಮಗಳು ಹಾಗೂ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರದ ಆದೇಶಗಳ ಪ್ರಕಾರ ಇರುವ ಪ್ರಚಲಿತ ನಿಯಮಗಳನ್ನು ಅನುಸರಿಸಿ ಆಯ್ಕೆ ಮಾಡಲು ಪ್ರಕಟಣೆಯನ್ನು ಸಾರ್ವಜನಿಕರ ತಿಳುವಳಿಕೆಗಾಗಿ ನೀಡಲಾಗಿದೆ.

ಟಿಪ್ಪಣಿ: ಈಗ ಅಧಿಸೂಚಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ. ಹಾಗೂ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಸ್ಥಳೀಯ ವೃಂದ ಹಾಗೂ ಮೂಲ ವೃಂದ ಮೀಸಲಾತಿಯಲ್ಲಿನ ಬದಲಾವಣೆಗೆ ಒಳಪಟ್ಟಿರುತ್ತದೆ.

### *02] ಆಯ್ಕೆಗೆ ಅರ್ಹತೆ:*

ಆಯ್ಕೆಗೆ ಅರ್ಹತೆ ಪಡೆಯಲು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳು ಆಯಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು ಹೊಂದಿರಬೇಕು. ಶಿಕ್ಷಕರ ಅರ್ಹತಾ ಪರೀಕ್ಷೆಯಲ್ಲಿ (ಟಿ.ಇ.ಟಿ) ಅರ್ಹತೆಗಳಿಸಿದ ಅಭ್ಯರ್ಥಿಗಳು ಮಾತ್ರ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಲ್ಲದೆ, ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಅವರು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ.ಯಲ್ಲಿ ಆ ನೇಮಕಾತಿ ಭಾಷೆಯ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರಬೇಕು ಅಥವಾ ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

### *03] ನಿಗದಿತ ಅರ್ಜಿ ನಮೂನೆ ಸಲ್ಲಿಸುವ ವಿಧಾನ:*

ಅಭ್ಯರ್ಥಿಯು ಆನ್‌ಲೈನ್ [ON LINE] ಮೂಲಕ ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ಮುಖಾಂತರ ಅರ್ಜಿ ಸಲ್ಲಿಸಬೇಕು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶ ಇರುವುದಿಲ್ಲ. ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ [After submission of application] ದೊರೆಯುವ ಗಣಕೀಕೃತ ಅರ್ಜಿ ಸಂಖ್ಯೆಯನ್ನು ಪಡೆದುಕೊಳ್ಳುವುದು ಮತ್ತು ಸದರಿ ಸಂಖ್ಯೆಯನ್ನು ಕಡ್ಡಾಯವಾಗಿ ಬರೆದಿಟ್ಟುಕೊಳ್ಳತಕ್ಕದ್ದು. ಈ ಅರ್ಜಿ ಸಂಖ್ಯೆಯು ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ. ಆನ್ ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ ಮತ್ತು ಚಲನ್ ಪ್ರತಿಗಳ ಮುದ್ರಿತ ಪ್ರತಿಗಳನ್ನು ತೆಗೆದುಕೊಳ್ಳತಕ್ಕದ್ದು. ಮುದ್ರಿತ ಚಲನ್ ಪ್ರತಿಯನ್ನು ಆಧರಿಸಿ ಪರೀಕ್ಷಾ ಶುಲ್ಕವನ್ನು ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಯಾವುದಾದರೂ ಶಾಖೆಯಲ್ಲಿ ಪಾವತಿಸಬಹುದು. ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ. ಹಾಗೂ ಸದರಿ ಶುಲ್ಕವನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಈ ಕೆಳಕಂಡಂತೆ ನಿಗದಿಪಡಿಸಿದ ಅರ್ಜಿ ಶುಲ್ಕವನ್ನು ಕೊನೆಯ ದಿನಾಂಕದೊಳಗೆ ಆನ್‌ಲೈನ್ ಮೂಲಕವೇ ಪಾವತಿಸುವುದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶಪತ್ರಗಳನ್ನು ಮೇಲೆ ನಮೂದಿಸಿರುವ ವೆಬ್‌ಸೈಟ್‌ನಲ್ಲಿ ಡೌನ್‌ಲೋಡ್ ಮಾಡಿಕೊಳ್ಳಬೇಕು. ಪ್ರವೇಶ ಪತ್ರಗಳನ್ನು ಡೌನ್‌ಲೋಡ್ ಮಾಡಿಕೊಳ್ಳಲು ನಿಗದಿಪಡಿಸಿದ ಅವಧಿಯನ್ನು ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಅನ್‌ಲೈನ್ ಅರ್ಜಿಯನ್ನು ಸಲ್ಲಿಸುವಾಗ ಅಭ್ಯರ್ಥಿಗೆ ನೀಡಿರುವ ನೊಂದಣಿ ಸಂಖ್ಯೆ ಮತ್ತು ಇತರೆ ಮಾಹಿತಿಯನ್ನು ವೆಬ್‌ಸೈಟ್‌ನಲ್ಲಿ ನಮೂದಿಸಿ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಡೌನ್‌ಲೋಡ್ ಮಾಡಿಕೊಳ್ಳುವುದು. ಕೊನೆಯ ದಿನಾಂಕದ ನಂತರ ಪಾವತಿಸಿದ ಅರ್ಜಿ ಶುಲ್ಕವನ್ನು ಪರಿಗಣಿಸಲಾಗುವುದಿಲ್ಲ ಮತ್ತು ಸ್ವೀಕರಿಸಲಾಗುವುದಿಲ್ಲ. ಅರ್ಜಿಗಳನ್ನು ಆನ್‌ಲೈನ್ ಮೂಲಕ ಭರ್ತಿ ಮಾಡಬೇಕಾಗಿದ್ದು, ಈ ಬಗ್ಗೆ ಮಾರ್ಗಸೂಚಿಯನ್ನು ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗಿದೆ.

### *04] ಅರ್ಜಿ ಸಲ್ಲಿಸಲು ಪಾವತಿಸಬೇಕಾದ ಶುಲ್ಕ:*

| *ಕ್ರಸ* | *ವಿವರ* | *1-5 ಅಥವಾ 6-8 ಒಂದು ಪರೀಕ್ಷೆಗೆ ( ರೂಗಳಲ್ಲಿ)* | *1-5 ಅಥವಾ 6-8 ಎರಡು ಪರೀಕ್ಷೆಗೆ ( ರೂಗಳಲ್ಲಿ)* |
|---|---|---|---|
| *01* | ಪರಿಶಿಷ್ಠ ಜಾತಿ, ಪರಿಶಿಷ್ಠ ವರ್ಗ, ಪ್ರವರ್ಗ-1/ ಅಂಗವಿಕಲ ಅಭ್ಯರ್ಥಿಗಳಿಗೆ ಸೇರಿದ ಅಭ್ಯರ್ಥಿಗಳಿಗೆ | *250* | *400* |
| *02* | ಇತರೆ ಎಲ್ಲಾ ಅಭ್ಯರ್ಥಿಗಳಿಗೆ | *500* | *800* |

### *05] ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:*

ದಿನಾಂಕ:27-04-2015 ಅಥವಾ ಅದಕ್ಕೂ ಮೊದಲು.

### *06] ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ:*

ಎಲ್ಲಾ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗದಿಪಡಿಸಿದೆ.

ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಹುದ್ದೆಗಳಿಗೆ ಟಿ.ಇ.ಟಿ ಪರೀಕ್ಷೆಯನ್ನು ತೇರ್ಗಡೆಯಾಗಿದ್ದಲ್ಲಿ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳ ಅವಶ್ಯಕತೆ ಇರುವುದಿಲ್ಲ. ಆದರೆ, ಹುದ್ದೆಗಳಿಗೆ ತಮ್ಮ ಆಧ್ಯತೆಯನ್ನು ನಮೂದಿಸಬೇಕು. ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿಯರ ವೃಂದದ ವಿಷಯಗಳ ಹಾಗೂ ವಿವಿಧ ಮಾಧ್ಯಮದ ಬ್ಲಾಕ್‌ವಾರು ಹುದ್ದೆಗಳ ಸಂಖ್ಯೆ ಮತ್ತು ಮೀಸಲಾತಿ ವರ್ಗೀಕರಣದ ವಿವರಗಳನ್ನು ಈ ಅಧಿಸೂಚನೆಗೆ ಲಗತ್ತಿಸಿರುವ ***"ವರ್ಗೀಕರಣದ ಅನುಬಂಧದಲ್ಲಿ"*** ಪ್ರತ್ಯೇಕವಾಗಿ ನೀಡಲಾಗಿದೆ.

***07] ಆಯ್ಕೆಗಾಗಿ 1-5ನೇ ತರಗತಿ ಹಾಗೂ 6-8 ನೇ ತರಗತಿ ಕಿರಿಯ /ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಬೋಧಿಸುವ ಶಿಕ್ಷಕರಿಗೆ ಹುದ್ದೆಗಳು ,ವೇತನ ಶ್ರೇಣಿ: ಅರ್ಹತೆ ಮತ್ತು ಆಯ್ಕೆ ವಿಧಾನವನ್ನು ಈ ಕೆಳಗೆ ನೀಡಲಾಗಿದೆ***

***08] ಅಭ್ಯರ್ಥಿಗಳ ಅರ್ಹತೆ:***

ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ಅರ್ಹತೆಗಳು.

- ***ವಿದ್ಯಾರ್ಹತೆ:***

  ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಯು ಉಲ್ಲೇಖ(11)ರ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಗೊಳಿಸಲಾಗಿರುವ ವಿದ್ಯಾರ್ಹತೆ ಹೊಂದಿರಬೇಕು. ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ವಿದ್ಯಾರ್ಹತೆ ವಿವರಗಳು ಕೆಳಗಿನಂತೆ ಇರುತ್ತವೆ.

***01.*** ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ], ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

***02.*** ಹುದ್ದೆಗಳ ಸಂಖ್ಯೆ ಹಾಗೂ ವಿಷಯಗಳು ಸಂಬಂಧಿಸಿದ ಅಧಿಸೂಚನೆಯಲ್ಲಿ ನಮೂದಿಸಿರುವ ಮ್ಯಾಟ್ರಿಕ್ಸ್‌ಗೆ ಅನುಗುಣವಾಗಿರುತ್ತದೆ. ಮ್ಯಾಟ್ರಿಕ್ಸ್ ಪ್ರತಿಯನ್ನು ಮಾಹಿತಿ ಪುಸ್ತಕದೊಂದಿಗೆ ಲಗತ್ತಿಸಿದೆ.

***ವೇತನ ಶ್ರೇಣಿ-[13600-26000]:-***

13600-300-14200-350-15600-400-17200-450-19000-500-21000-600-24600-700-26000

***I ಪ್ರಾಥಮಿಕ ಶಾಲಾ 1-5ನೇ ತರಗತಿಗಾಗಿ ಸರ್ಕಾರಿ ಕಿರಿಯ/ಹಿರಿಯ ಪ್ರಾಥಮಿಕ ಶಾಲೆಗೆ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ] ಹುದ್ದೆಗಳಿಗೆ:***

***ಅ.*** ಅಭ್ಯರ್ಥಿಯು ಗೊತ್ತುಪಡಿಸಿದ ಮಂಡಳಿಯು ನಡೆಸುವ ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಸಾಮಾನ್ಯ ಹಾಗೂ ಹಿಂದುಳಿದ ಅಭ್ಯರ್ಥಿಗಳೂ ಕನಿಷ್ಟ ಶೇಕಡ 50%ನ್ನು ಹಾಗೂ. ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ 45% ಅಂಕಗಳೊಂದಿಗೆ ತೇರ್ಗಡೆ ಹೊಂದಿರಬೇಕು. ಮತ್ತು ಎರಡು ವರ್ಷದ ಡಿ.ಇಡಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರತಕ್ಕದ್ದು

ಅಥವಾ

ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ ಶೇಕಡ 45% ನ್ನು **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳನ್ನು ನಾಲ್ಕು ವರ್ಷದ ಬ್ಯಾಚುಲರ್ ಆಫ್ ಎಲಿಮೆಂಟರಿ ಎಜುಕೇಷನ್‌ನ ವಿದ್ಯಾರ್ಹತೆ ಹೊಂದಿರತಕ್ಕದ್ದು

ಅಥವಾ

ಮಂಡಳಿಯು ನಡೆಸುವ ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ 45 % **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳನ್ನು ಪಡೆದಿರತಕ್ಕದ್ದು ಮತ್ತು ಎನ್.ಸಿ.ಟಿ.ಇ ನಿಯಮಗಳ ರೀತ್ಯಾ ಎರಡು ವರ್ಷದ ಡಿಪ್ಲೋಮೋ ಇನ್ ಎಜುಕೇಷನ್ ( ಸ್ಪೆಷಲ್ ಎಡುಕೇಷನ್)ನ್ನು ಹೊಂದಿರತಕ್ಕದ್ದು

ಮತ್ತು

ಸರ್ಕಾರವು ಗೊತ್ತುಪಡಿಸಿದ ಸಕ್ಷಮ ಪ್ರಾಧಿಕಾರಿಯು ನಡೆಸುವ ಶಿಕ್ಷಕರ ಅರ್ಹತಾ ಪರೀಕ್ಷೆ ಪೇಪರ್-01 ರಲ್ಲಿ ತೇರ್ಗಡೆಹೊಂದಿರತಕ್ಕದ್ದು

ಹಾಗೂ

ಸರ್ಕಾರಿ ಕಿರಿಯ ಹಾಗೂ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 1–5ನೇ ತರಗತಿ ಬೋಧಿಸಲು ಅರ್ಜಿಸಲ್ಲಿಸುವ ಅಭ್ಯರ್ಥಿಯು ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಸಾಮಾನ್ಯ ( ಕನ್ನಡ, ಉರ್ದು.ತೆಮಿಳ್, ತೆಲುಗು, ಬಂಗಾಲಿ ಅಥವಾ ಮರಾಠಿ) ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ / ಡಿ.ಇಡಿ./ ತತ್ಸಮಾನ ಪರೀಕ್ಷೆಯಲ್ಲಿ ಅಭ್ಯಾಸ ಮಾಡಿರಬೇಕು. ಅಥವಾ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಅಬ್ಯಾಸ ಮಾಡಿರಬೇಕು.

. ಅಥವಾ

***ಕನ್ನಡ ಮಾಧ್ಯಮದ ಶಾಲೆಗಳ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***II 6-8 ನೇ ತರಗತಿಯಲ್ಲಿನ ಉನ್ನತೀಕರಿಸಿದ ಪ್ರಾಥಮಿಕ ಶಾಲೆಗಳಿಗೆ ಪದವೀಧರ ಸಹಶಿಕ್ಷಕರ ನೇಮಕಾತಿ***

***01.*** ಪ್ರಾಥಮಿಕ ಶಾಲಾ ಪದವೀದರ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ], ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

***02.*** ಹುದ್ದೆಗಳ ಸಂಖ್ಯೆ ಹಾಗೂ ವಿಷಯಗಳು ಸಂಬಂಧಿಸಿದ ಅಧಿಸೂಚನೆಯಲ್ಲಿ ನಮೂದಿಸಿರುವ ಮ್ಯಾಟ್ರಿಕ್ಸ್‌ಗೆ ಅನುಗುಣವಾಗಿರುತ್ತದೆ. ಮ್ಯಾಟ್ರಿಕ್ಸ್ ಪ್ರತಿಯನ್ನು ಮಾಹಿತಿ ಪುಸ್ತಕದೊಂದಿಗೆ ಲಗತ್ತಿಸಿದೆ.

***ವೇತನ ಶ್ರೇಣಿ–[14550–26700]:–***

***ವೇತನಶ್ರೇಣಿ–[14550–***350–15600–400–17200–450–19000–500–21000–600–24600–700***–26700]:***

***02] ಆಯ್ಕೆಗೆ ಅರ್ಹತೆ:***

ಆಯ್ಕೆಗೆ ಅರ್ಹತೆ ಪಡೆಯಲು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳು ಆಯಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿ ಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು ಹೊಂದಿರಬೇಕು. ಶಿಕ್ಷಕರ ಅರ್ಹತಾ ಪರೀಕ್ಷೆಯಲ್ಲಿನ (ಟಿ.ಇ.ಟಿ) ಪೇಪರ್–2ನಲ್ಲಿ ಅರ್ಹತೆಗಳಿಸಿದ ಅಭ್ಯರ್ಥಿಗಳು ಮಾತ್ರ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಲ್ಲದೆ, ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಅವರು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ./ ಡಿಇಡಿ/ಬಿಇಡಿ ಯಲ್ಲಿ ಆ ನೇಮಕಾತಿ ವಿಷಯದ ಭಾಷಾ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರಬೇಕು ಅಥವಾ ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

***I ಪ್ರಾಥಮಿಕ ಶಾಲಾ 6–8ನೇ ತರಗತಿ ಪದವೀಧರ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ] ಹುದ್ದೆಗಳಿಗೆ:***

**ಅ.** ಹಿರಿಯ ಪ್ರಾಥಮಿಕ ಶಾಲೆಯಲ್ಲಿನ ಪದವೀದರ ಶಿಕ್ಷಕರ ನೇಮಕಾತಿಗಾಗಿ ಅಭ್ಯರ್ಥಿಯು ಬಿಎ ಪದವಿಯನ್ನು ಮತ್ತು ಎರಡು ವರ್ಷದ ಡಿ.ಇಡಿ ಪರೀಕ್ಷೆಯನ್ನು ತೇರ್ಗಡೆ ಹೊಂದಿರಬೇಕು.

ಅಥವಾ

ಬಿಎ ಪದವಿಯಲ್ಲಿ ಶೇಕಡ 50% ಅಂಕಗಳನ್ನು ಮತ್ತು ಒಂದು ವರ್ಷದ ಬಿ.ಇಡಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

ಅಥವಾ

ಪಿ.ಯು.ಸಿ ಯಲ್ಲಿ ಶೇಕಡ 50% ಅಂಕಗಳೊಂದಿಗೆ 04 ವರ್ಷದ ಬ್ಯಾಚುಲರ್ ಆಫ್ ಎಲಿಮೆಂಟರಿ ಎಜುಕೇಷನ್ (ಬಿ.ಎಲ್.ಇಡಿ)ನಲ್ಲಿ ಉತ್ತೀರ್ಣರಾಗಿರಬೇಕು

ಅಥವಾ

ಪಿ.ಯು.ಸಿ ಯಲ್ಲಿ ಶೇಕಡ 50% ಅಂಕಗಳು ಹಾಗೂ 04 ವರ್ಷದ ಬ್ಯಾಚುಲರ್ ಆಫ್ ಎಜುಕೇಷನ್( ಬಿಎ.ಇಡಿ) ನಲ್ಲಿ ಉತ್ತೀರ್ಣರಾಗಿರಬೇಕು

ಅಥವಾ

ಬಿ.ಎ ಪದವಿಯಲ್ಲಿ ಮತ್ತು ಒಂದು ವರ್ಷದ ಬಿಇಡಿ (ಸ್ಪೆಷಲ್ ಎಜುಕೇಷನ್) ನಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ ಶೇಕಡ 45% ಅಂಕಗಳನ್ನು **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳನ್ನು ಪದವಿಯಲ್ಲಿ ಹೊಂದಿರತಕ್ಕದ್ದು

ಮತ್ತು

ಸರ್ಕಾರ ಗೊತ್ತುಪಡಿಸಿದ ಸಕ್ಷಮ ಪ್ರಾಧಿಕಾರಿಯು ನಡೆಸಿರುವ ಶಿಕ್ಷಕರ ಅರ್ಹತಾ ಪರೀಕ್ಷೆ (ಪೇಪರ್-2) ನ್ನು ತೇರ್ಗಡೆಹೊಂದಿರತಕ್ಕದ್ದು

ಮತ್ತು

**ಆ.** ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 6-8ನೇ ತರಗತಿ ಬೋಧಿಸಲು ಅರ್ಜಿಸಲ್ಲಿಸುವ ಅಭ್ಯರ್ಥಿಯು ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಸಾಮಾನ್ಯ (ಕನ್ನಡ, ಉರ್ದು, ತೆಮಿಳ್, ತೆಲುಗು, ಬಂಗಾಲಿ ಅಥವಾ ಮರಾಠಿ) ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿ/ ಡಿಇಡಿ/ ಬಿಇಡಿ ತತ್ಸಮಾನ ಪರೀಕ್ಷೆಯಲ್ಲಿ ಅಭ್ಯಾಸ ಮಾಡಿರಬೇಕು. ಅಥವಾ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿಯಲ್ಲಿ ಅಬ್ಯಾಸ ಮಾಡಿರಬೇಕು.

ಅಥವಾ

***ಕನ್ನಡ ಮಾಧ್ಯಮದ ಶಾಲೆಗಳ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***III ಪ್ರಾಥಮಿಕ ಶಾಲಾ 6-8ನೇ ತರಗತಿ ಪದವೀಧರ ಸಹಶಿಕ್ಷಕ/ಶಿಕ್ಷಕಿ [ಆಂಗ್ಲ ಭಾಷೆ] ಹುದ್ದೆಗಳಿಗೆ:***

***01.*** 03 ವರ್ಷದ ಕಲಾ/ ವಿಜ್ಞಾನ ಪದವಿಯಲ್ಲಿ ಶೇಕಡಾ 50% ಅಂಕಗಳನ್ನು ಮತ್ತು ಆಂಗ್ಲಭಾಷೆಯನ್ನು ಒಂದು ಐಚ್ಛಿಕ ವಿಷಯವಾಗಿ ಮೂರು ವರ್ಷದ ಪದವಿಯಲ್ಲಿ ಅಭ್ಯಾಸಮಾಡಿರಬೇಕು

***ಅಥವಾ***

ಬಿಎ.ಇಡಿ/ ಬಿಎಸ್ಸಿ ಇಡಿ ಪದವಿಯಲ್ಲಿ ಕನಿಷ್ಟ ಶೇಕಡಾ 50% ಅಂಕಗಳನ್ನು ಮತ್ತು ಆಂಗ್ಲಭಾಷೆಯನ್ನು ಒಂದು ಐಚ್ಛಿಕ ವಿಷಯವಾಗಿ ಅಭ್ಯಾಸಮಾಡಿರಬೇಕು

***ಅಥವಾ***

ಪಿಯುಸಿ. ವಿಜ್ಞಾನ (ಪಿ.ಸಿ.ಎಂಬಿ)ಯಲ್ಲಿ ಶೇಕಡಾ 50% ಅಂಕಗಳನ್ನು ಮತ್ತು 04 ವರ್ಷದ ಬ್ಯಾಚುಲರ್ ಇನ್ ಎಲಿಮೆಂಟರಿ ಎಜುಕೇಷನ್( ಬಿ.ಎಲ್.ಇಡಿ) ನಲ್ಲಿ ಉತ್ತೀರ್ಣರಾಗಿರಬೇಕು ಹಾಗೂ ಆಂಗ್ಲಭಾಷೆಯನ್ನು ಐಚ್ಛಿಕ ವಿಷಯವಾಗಿ 03 ವರ್ಷದ ಪದವಿಯಲ್ಲಿ ಅಭ್ಯಾಸಮಾಡಿರಬೇಕು

ಮತ್ತು

ಅ) ಬಿಇಡಿ/ ಡಿಇಡಿ ಯಲ್ಲಿ ಆಂಗ್ಲಭಾಷೆಯನ್ನು ಬೋಧನಾ ವಿಷಯವಾಗಿ ಅಭ್ಯಾಸಮಾಡಿರಬೇಕು ( Method of teaching)

***ಅಥವಾ***

ಒಂದು ವರ್ಷದ ಬ್ಯಾಚುಲರ್ ಆಫ್ ಎಜುಕೇಷನ್ ಬಿಇಡಿ ಪದವಿ ( ಸ್ಪೆಷಲ್ ಎಜುಕೇಷನ್) ನಲ್ಲಿ ಆಂಗ್ಲಭಾಷೆಯನ್ನು ಬೋಧನಾ ವಿಷಯವಾಗಿ ಅಭ್ಯಾಸಮಾಡಿರಬೇಕು ( Method of teaching)

***ಅಥವಾ***

ಆಂಗ್ಲಭಾಷೆಯನ್ನು ಐಚ್ಛಿಕ ವಿಷಯವಾಗಿ ಬಿಎ(ಕಲಾ) ಮತ್ತು ಬಿ.ಎಸ್ಸಿ (ವಿಜ್ಞಾನ) ಪದವಿಯಲ್ಲಿ ಅಬ್ಯಾಸಮಾಡಿರಬೇಕು ಮತ್ತು ಬಿಇಡಿ ಪದವಿಯಲ್ಲಿ/ ಎರಡು ವರ್ಷದ ಡಿಇಡಿಯಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ ಶೇಕಡ 45% ನ್ನು **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳೊಂದಿಗೆ ಮೂರು ವರ್ಷದ ಪದವಿಯಲ್ಲಿ ಆಂಗ್ಲಭಾಷೆಯನ್ನು ಐಚ್ಛಿಕ ವಿಷಯವಾಗಿ ಅಬ್ಯಾಸಮಾಡಿರಬೇಕು

ಮತ್ತು

ಅ) ಸರ್ಕಾರ ಗೊತ್ತುಪಡಿಸಿದ ಸಕ್ಷಮ ಪ್ರಾಧಿಕಾರಿಯು ನಡೆಸಿರುವ ಶಿಕ್ಷಕರ ಅರ್ಹತಾ ಪರೀಕ್ಷೆ (ಪೇಪರ್–2) ನ್ನು ತೇರ್ಗಡೆಹೊಂದಿರತಕ್ಕದ್ದು

***ಆ) ಕಲಾ/ ವಿಜ್ಞಾನ ವಿಷಯದ ಪದವಿಯಲ್ಲಿ*** ಆಂಗ್ಲಭಾಷೆಯನ್ನು ಐಚ್ಛಿಕ ವಿಷಯವಾಗಿ ಅಭ್ಯಾಸಮಾಡದಿದ್ದಲ್ಲಿ

ಅ) ಯು.ಜಿಸಿ ಯಿಂದ ಮಾನ್ಯತೆ ಪಡೆದ ಅಂಗೀಕೃತ ವಿಶವಿದ್ಯಾಲಯದಿಂದ ಸ್ನಾತಕೋತ್ತರ ಪದವಿಯಲ್ಲಿ ಆಂಗ್ಲ ಭಾಷೆಯನ್ನು ಅಬ್ಯಾಸಮಾಡಿರಬೇಕು

ಅಥವಾ

ಆಂಗ್ಲ ಭಾಷಾ ಹುದ್ದೆಗೆ ಅಭ್ಯರ್ಥಿಗಳು ರೀಜನಲ್ ಇನ್ಸ್‌ಟಿಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾ ಇವರು ನಡೆಸುವ ಪೋಸ್ಟ್ ಗ್ರಾಜುಯೇಟ್ ಡಿಪ್ಲೊಮೋ ಇನ್ ಇಂಗ್ಲಿಷ್ ಪ್ರಮಾಣ ಪತ್ರವನ್ನು ಹೊಂದಿದ್ದಲ್ಲಿ ಪರಿಗಣಿಸಲಾಗುವುದು

ಮತ್ತು

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 6–8ನೇ ತರಗತಿ ಬೋದಿಸಲು ಅರ್ಜಿಸಲ್ಲಿಸುವ ಅಭ್ಯರ್ಥಿಯು ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿ/ ಡಿಇಡಿ/ ಬಿಇಡಿ ತತ್ಸಮಾನ ಪರೀಕ್ಷೆಯಲ್ಲಿ ಅಭ್ಯಾಸ ಮಾಡಿರಬೇಕು. ಅಥವಾ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿಯಲ್ಲಿ ಅಬ್ಯಾಸ ಮಾಡಿರಬೇಕು.

***C&R Rules ನಲ್ಲಿ "Note: Primary School Assistant Masters / Misters [Science], [English], [Hindi], in primary, Higher Primary and Model Higher Primary School shall form port of the General cadre and they shall teach other subjects also in addition to science / English / Hindi to make up the normal work load for the teacher"*** ಎಂದಿರುತ್ತದೆ.

ಆದ್ದರಿಂದ ಪ್ರಾಥಮಿಕ, ಹಿರಿಯ ಮಾದರಿ ಹಾಗೂ ಉನ್ನತೀಕರಿಸಿದ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ವಿಜ್ಞಾನ / ಆಂಗ್ಲ / ಹಿಂದಿ ಪ್ರಾಥಮಿಕ ಶಾಲಾ ಸಹಶಿಕ್ಷಕರು ಸಾಮಾನ್ಯ ಶಿಕ್ಷಕರ ಹುದ್ದೆಯ ಭಾಗವಾಗಿರುತ್ತಾರೆ. ಈ ಶಿಕ್ಷಕರು ಕಾರ್ಯಭಾರ ಹೊಂದಾಣಿಕೆಗೆ ವಿಜ್ಞಾನ / ಆಂಗ್ಲ / ಹಿಂದಿ ವಿಷಯಗಳೊಂದಿಗೆ ಇತರೆ ವಿಷಯಗಳನ್ನು ಸಹಾ ಸಂಬಂಧಿಸಿದ ಶಾಲಾ ಮಾಧ್ಯಮಗಳಲ್ಲಿ ಬೋಧಿಸತಕ್ಕದ್ದು.

***ಸೂಚನೆ:*** ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗುವುದಿಲ್ಲ. ನಿಗದಿ ಪಡಿಸಿದ ಕೊನೆಯ ದಿನಾಂಕದಂದು ವಿದ್ಯಾರ್ಹತೆಯ ಅಂಕಪಟ್ಟಿ ಹಾಗೂ ಇತರೆ ಸರ್ಟಿಫಿಕೇಟ್‌ಗಳನ್ನು ಪಡೆದಿರಬೇಕು.

### *09] ವಯೋಮಿತಿ:*

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

***[ಅ]*** ಕನಿಷ್ಠ 18ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

***[ಆ]*** ಗರಿಷ್ಠ ವಯೋಮಿತಿ:

| | |
|---|---|
| ಸಾಮಾನ್ಯ ವರ್ಗ | 40 ವರ್ಷ |
| 2ಎ, 2ಬಿ, 3ಎ, 3ಬಿ | 43 ವರ್ಷ |
| ಪ.ಜಾ/ಪ.ಪಂ/ಪ್ರವರ್ಗ–1 | 45 ವರ್ಷ |

***ಸೂಚನೆ:*** ಗೌರವ ಶಿಕ್ಷಕರಿಗೆ ಗರಿಷ್ಠ ವಯೋಮಿತಿ ಅನ್ವಯಿಸುವುದಿಲ್ಲ.

***ಟಿಪ್ಪಣಿ: ಗೌರವ ಶಿಕ್ಷಕರೆಂದರೆ:***

ಜಿಲ್ಲಾ ಪಂಚಾಯತ್ / ಮಂಡಲ ಪಂಚಾಯತ್ ವತಿಯಿಂದ ನೇಮಕಾತಿ ಹೊಂದಿ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯ ನಿರ್ವಹಿಸಿರಬೇಕು / ನಿರ್ವಹಿಸುತ್ತಿರಬೇಕು. ಹಾಗೂ ಗೌರವಧನವನ್ನು ಜಿಲ್ಲಾ ಪಂಚಾಯತ್ / ಮಂಡಲ ಪಂಚಾಯತ್ ವತಿಯಿಂದ ಪಡೆದಿರಬೇಕು / ಪಡೆಯುತ್ತಿರಬೇಕು. ಖಾಸಗಿ ಶಾಲೆಗಳಲ್ಲಿ ಮತ್ತು ಇತರ ಇಲಾಖೆಗಳಲ್ಲಿ ಗೌರವ ಶಿಕ್ಷಕರಾಗಿ ಕಾರ್ಯ ನಿರ್ವಹಿಸಿರುವವರು ಕೃಪಾಂಕ ಪಡೆಯಲು ಅರ್ಹರಿರುವುದಿಲ್ಲ.

***10] ಅರ್ಹತೆ [ಮೆರಿಟ್] ನಿರ್ಧರಿಸುವ ವಿಧಾನ:***

***ಎ] 1-5ನೇ ತರಗತಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ***

- ಟಿಇಟಿ ಪರೀಕ್ಷೆಯ ಪೇಪರ್-1 ನ್ನು ಕಡ್ಡಾಯವಾಗಿ ತೇರ್ಗಡೆಯಾಗಿರಬೇಕು
- ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ದ್ವಿತೀಯ ಪಿ.ಯು.ಸಿ.ಯಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಪ್ರಥಮ ಮತ್ತು ದ್ವಿತೀಯ ಟಿ.ಸಿ.ಹೆಚ್ / ಡಿ.ಇಡಿ.,ಗಳ ಬಾಹ್ಯ ಅಂಕಗಳು ಪಿ.ಯು.ಸಿ ಎಜುಕೇಷನ್ ಪರೀಕ್ಷೆಗಳಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾ ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಎಸ್.ಎಸ್.ಎಲ್.ಸಿ / ದ್ವಿತೀಯ ಪಿ.ಯು.ಸಿ ಶೇಕಡಾ ಅಂಕಗಳ ಶೇಕಡಾ 35% + ಎರಡು ವರ್ಷಗಳ ಟಿ.ಸಿ.ಹೆಚ್ / ಡಿ.ಇಡಿ., ಬಾಹ್ಯ ಅಂಕಗಳ ಶೇಕಡಾ ಅಂಕ / ಪಿ.ಯು.ಸಿ ಎಜುಕೇಷನ್‌ನ ದ್ವಿತೀಯ ಪರೀಕ್ಷೆಯ ಶೇಕಡಾ ಅಂಕಗಳ 15 % + ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡಾ ಅಂಕಗಳ 35% ಹಾಗೂ ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಶೇಕಡ ಅಂಕಗಳ 15% ವೇಟೇಜ್ (weightage)ಇವುಗಳ ಸರಾಸರಿ ಆಧರಿಸಿ ಮೆರಿಟನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಸೇವೆ ಸಲ್ಲಿಸಿದ್ದಲ್ಲಿ / ಸಲ್ಲಿಸುತ್ತಿದ್ದಲ್ಲಿ ಇವರಿಗೆ ಪೂರ್ಣಗೊಂಡ ಪ್ರತಿ ವರ್ಷದ ಸೇವಾ ಅವಧಿಗೆ 3 ಕೃಪಾಂಕಗಳಂತೆ ಗರಿಷ್ಠ 15 ಕೃಪಾಂಕಗಳ ಮಿತಿಗೆ ಒಳಪಟ್ಟ ಕೃಪಾಂಕಗಳನ್ನು ನೀಡಲಾಗುವುದು.
- ಗೌರವ ಶಿಕ್ಷಕರು / ಅರೆಕಾಲಿಕ ಶಿಕ್ಷಕರಾಗಿದ್ದಲ್ಲಿ ಸಂಬಂಧಿಸಿದ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಸಲ್ಲಿಸಬೇಕು.
- ಸರಾಸರಿ ಶೇಕಡಾವಾರು ಅಂಕಕ್ಕೆ ಅಭ್ಯರ್ಥಿಯ ಕೃಪಾಂಕಗಳನ್ನು ಸೇರಿಸಲಾಗುವುದು. [ಕೃಪಾಂಕಕ್ಕೆ ಅಭ್ಯರ್ಥಿಯು ಅರ್ಹರಿದ್ದಲ್ಲಿ ಮಾತ್ರ] ಈ ಒಟ್ಟು ಅಂಕಗಳನ್ನು ಅರ್ಹತಾ ಅಂಕವೆಂದು ಪರಿಗಣಿಸಲಾಗುತ್ತದೆ.

***ಬಿ] 6-8 ನೇ ತರಗತಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ***

- ಟಿಇಟಿ ಪರೀಕ್ಷೆಯ ಪೇಪರ್-2ನ್ನು ಕಡ್ಡಾಯವಾಗಿ ತೇರ್ಗಡೆಯಾಗಿರಬೇಕು
- ಪದವೀಧರ ಸಹಶಿಕ್ಷಕರ (ಸಾಮಾನ್ಯ) ಹುದ್ದೆಗೆ ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ಪದವಿಯಲ್ಲಿ ಎಲ್ಲಾ ವರ್ಷಗಳಲ್ಲಿ/ಸೆಮಿಸ್ಟರ್‌ಗಳಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಡಿಇಡಿ/ಬಿಇಡಿ , ಡಿಇಡಿ/ಬಿಇಡಿ ಸ್ಪೆಷಲ್ ಎಜುಕೇಷನ್ ಪರೀಕ್ಷೆಗಳಲ್ಲಿ ಗಳಿಸಿದ ಒಟ್ಟು ಬಾಹ್ಯ ಅಂಕಗಳ ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾ ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಬಿಎ/ಬಿಎಸ್ಸಿ ತತ್ಸಮಾನ ಪದವಿ ಯಲ್ಲಿನ ಶೇಕಡಾ ಅಂಕಗಳ ಶೇಕಡಾ 35% + ಎರಡು ವರ್ಷಗಳ ಡಿಇಡಿ/ ಬಿಇಡಿ./ ಸ್ಪೆಷಲ್ ಡಿಇಡಿ/ಬಿಇಡಿ ಬಾಹ್ಯ ಅಂಕಗಳ ಶೇಕಡಾ ಅಂಕ ಪರೀಕ್ಷೆಯ ಶೇಕಡಾ ಅಂಕಗಳ 15 % +

ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡಾ ಅಂಕಗಳ 35% ಹಾಗೂ ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಶೇಕಡ ಅಂಕಗಳ 15% ವೇಟೇಜ್ (weightage)ಇವುಗಳ ಸರಾಸರಿ ಆಧರಿಸಿ ಮೆರಿಟನ್ನು ಲೆಕ್ಕ ಹಾಕಲಾಗುವುದು.

- ***ಸೂಚನೆ:*** ಸರ್ಕಾರದ ಅನುಮೋದನೆಯಂತೆ ಆಯುಕ್ತರ ಅಧಿಕೃತ ಜ್ಞಾಪನ ಸಂಖ್ಯೆ:ಸಿ3[1]ಪ್ರಾಶಿ:ನೇ:20[ಎ]:ಭಾಗ–3: 2005–06, ದಿನಾಂಕ:03.11.2006ರ ಪ್ರಕಾರ ಟಿ.ಸಿ.ಹೆಚ್., ಮತ್ತು ಡಿ.ಇಡಿ., ಪರೀಕ್ಷೆಗಳ ಅಂತರಿಕ ಮೌಲ್ಯಮಾಪನ ಅಂಕಗಳನ್ನು ಹೊರತುಪಡಿಸಿ ಕೇವಲ ಬಾಹ್ಯ ಅಂಕಗಳನ್ನು ಮಾತ್ರ ಆಯ್ಕೆಗೆ ಪರಿಗಣಿಸಲಾಗುವುದು.

- ಅಭ್ಯರ್ಥಿಯು ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಸೇವೆ ಸಲ್ಲಿಸಿದ್ದಲ್ಲಿ / ಸಲ್ಲಿಸುತ್ತಿದ್ದಲ್ಲಿ ಇವರಿಗೆ ಪೂರ್ಣಗೊಂಡ ಪ್ರತಿ ವರ್ಷದ ಸೇವಾ ಅವಧಿಗೆ 3 ಕೃಪಾಂಕಗಳಂತೆ ಗರಿಷ್ಠ 15 ಕೃಪಾಂಕಗಳ ಮಿತಿಗೆ ಒಳಪಟ್ಟ ಕೃಪಾಂಕಗಳನ್ನು ನೀಡಲಾಗುವುದು.
- ಗೌರವ ಶಿಕ್ಷಕರು / ಅರೆಕಾಲಿಕ ಶಿಕ್ಷಕರಾಗಿದ್ದಲ್ಲಿ ಸಂಬಂಧಿಸಿದ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಸಲ್ಲಿಸಬೇಕು.
- ಸರಾಸರಿ ಶೇಕಡಾವಾರು ಅಂಕಕ್ಕೆ ಅಭ್ಯರ್ಥಿಯ ಕೃಪಾಂಕಗಳನ್ನು ಸೇರಿಸಲಾಗುವುದು. [ಕೃಪಾಂಕಕ್ಕೆ ಅಭ್ಯರ್ಥಿಯು ಅರ್ಹರಿದ್ದಲ್ಲಿ ಮಾತ್ರ] ಈ ಒಟ್ಟು ಅಂಕಗಳನ್ನು ಅರ್ಹತಾ ಅಂಕವೆಂದು ಪರಿಗಣಿಸಲಾಗುತ್ತದೆ.

****** ಅರ್ಜಿ ಭರ್ತಿಮಾಡಲು ಕೊಟ್ಟಿರುವ ಸೂಚನೆಗಳನ್ನು ಗಮನಿಸುವುದು.***

### *11] ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು: [ಅ]*

| | | | |
|---|---|---|---|
| ***01.*** | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | : | ನಮೂನೆ–ಡಿ [ನಿಯಮ–3.ಎ(2)(3)], ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:132:ಎಸ್‌ಎಡಿ:1997, ದಿನಾಂಕ:08.02.2000 |
| ***02.*** | ಹಿಂದುಳಿದ ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳು. | : | ನಮೂನೆ–ಇ [ನಿಯಮ–3.ಎ(2)(3)], ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:132:ಎಸ್‌ಎಡಿ:1997, ದಿನಾಂಕ:08.02.2000 |
| ***03.*** | ಹಿಂದುಳಿದ ಪ್ರವರ್ಗ–2.ಎ, 2.ಬಿ, 3.ಎ ಮತ್ತು 3.ಬಿ ಈ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು. | : | ನಮೂನೆ–ಎಫ್ [ನಿಯಮ–3.ಎ(2)(3)] ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:126:ಎಸ್‌ಎಡಿ:1997, ದಿನಾಂಕ:13.02.2003 |

ಅಭ್ಯರ್ಥಿಗಳು ಮೇಲೆ ನಿಗದಿಪಡಿಸಿರುವ ನಿಗದಿತ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರವಿರಬೇಕು ಮತ್ತು ಅವಧಿ ಮೀರಿದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

| | | | |
|---|---|---|---|
| ***04.*** | ಹೈದ್ರಾಬಾದ್ ಕರ್ನಾಟಕ ಪ್ರದೇಶದ 6 ಜಿಲ್ಲೆಗಳ ನೇಮಕಾತಿಯಲ್ಲಿ ಮೀಸಲಾತಿ ಪಡೆಯ ಬಯಸುವ ಅಭ್ಯರ್ಥಿಗಳು. | : | ಸರ್ಕಾರದಆದೇಶಸಂಖ್ಯೆ:ಸಿಆಸುಇ43:ಹೆಚ್‌ಕೆಸಿ 2013: ದಿನಾಂಕ:29.01.2014ರಲ್ಲಿನಿಗಧಿಪಡಿಸಿದ ನಮೂನೆಗಳಲ್ಲಿ ಅರ್ಜಿಸಲ್ಲಿಸಲು ನಿಗಧಿಪಡಿಸಿದ ದಿನಾಂಕಗೊಳಗೆ ಸಕ್ಷಮ ಪ್ರಾಧಿಕಾರದಿಂದ ಪಡೆದುಕೊಂಡಿರಬೇಕು |

***[ಆ]*** ಮೇಲೆ ವಿವರಿಸಿರುವ ಪ್ರಕಾರ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ "ಸಮತಳ ಮೀಸಲಾತಿ" [Horizontal reservation] ಅನ್ವಯ ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | | |
|---|---|---|---|
| ***01.*** | ಮಾಜಿ ಸೈನಿಕರಿಗೆ | ಶೇಕಡಾ– 10 | ಕರ್ನಾಟಕ ಸಿವಿಲ್ ಸರ್ವೀಸಸ್ [ಜನರಲ್ ರೆಕ್ರೊಟ್‌ಮೆಂಟ್] ರೂಲ್ಸ್ 1977ರ ನಿಯಮ–9[1]ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |

| | | | |
|---|---|---|---|
| *02.* | ಅಂಗವಿಕಲರಿಗೆ | ಶೇಕಡಾ–5 | ಕರ್ನಾಟಕ ಸಿವಿಲ್ ಸರ್ವಿಸಸ್ [ಜನರಲ್ ರೆಕ್ರೊಟ್‌ಮೆಂಟ್] ರೂಲ್ಸ್ 1977ರ ನಿಯಮ–9[1][ಎ]ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *03.* | ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದವರ ಅಭ್ಯರ್ಥಿಗಳಿಗಾಗಿ | ಶೇಕಡಾ–5 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:23:ಎಸ್‌ಆರ್‌ಆರ್:1999 ದಿನಾಂಕ:23.11.2000 ಮತ್ತು ಸಂಖ್ಯದ:ಸಿಆಸುಇ:97:ಸೇನಿನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *04.* | ಗ್ರಾಮೀಣ ಅಭ್ಯರ್ಥಿಗಳಿಗೆ | ಶೇಕಡಾ–25 | 2000ದ ಕರ್ನಾಟಕ ಗ್ರಾಮಿಣ ಅಭ್ಯರ್ಥಿಗಳಿಗಾಗಿ [ರಾಜ್ಯ ಸಿವಿಲ್ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿ ವಿದೇಯಕ] ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನಿನಿ:2002 ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *05.* | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇಕಡಾ–5 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:71:ಎಸ್‌ಆರ್‌ಆರ್:2001 ದಿ:24.10.2002 ಮತ್ತು ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *06.* | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡಾ–50 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:41:ಎಸ್‌ಆರ್‌ಇ: 2001, ದಿನಾಂಕ:09.08.2001ರ ಪ್ರಕಾರ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರಲಾಗಿದ್ದು, ಮಹಿಳೆಯರಿಗೆ ಪ್ರತಿ ಗುಂಪಿನಲ್ಲೂ ಶೇಕಡಾ 50% ಹುದ್ದೆಗಳನ್ನು ಮೀಸಲಿಸಲಾಗಿದೆ. ಮತ್ತು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿನಾಂಕ:01.04.2008. |

***12] ಮಾಜಿ ಸೈನಿಕ ಅಭ್ಯರ್ಥಿಗಳು:***

"ಮಾಜಿ ಸೈನಿಕ"ರಿಗಾಗಿ ಮೀಸಲಿಟ್ಟ ಖಾಲಿ ಹುದ್ದೆಗಳನ್ನು ಮಿಲಿಟರಿ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿಗಳಿಂದ ಮತ್ತು ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರಿಂದ ನೇಮಕಾತಿ ಮೂಲಕ ತುಂಬಲಾಗುತ್ತದೆ.

***ಮಾಜಿ ಸೈನಿಕರ ಗುಂಪಿನಲ್ಲಿ ಕೆಳಕಂಡವರು ಆಯ್ಕೆಗೆ ಅರ್ಹರು:***

***01. ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ [ಯೋಧ ಅಥವಾ ಅಯೋಧನಾಗಿ] ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:***

***[ಅ]*** ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

ಅಥವಾ

***[ಆ]*** ವೈಧ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈಧ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗೆಡೆಯಾದ ವ್ಯಕ್ತಿ.

ಅಥವಾ

***[ಇ]*** ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

ಅಥವಾ

***[ಈ]*** ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಠ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

***02. ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:***

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು. [ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು, ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ, ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ]

***03. ಮಾಜಿ ಸೈನಿಕ ಗುಂಪಿನಲ್ಲಿ ಆಯ್ಕೆ ಹೊಂದಲು ಈ ಕೆಳಕಂಡವರು ಅರ್ಹರಲ್ಲ:***

[ಅ] ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕೋರ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.

[ಆ] ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

***ಸೂಚನೆ:*** ***"ಮಾಜಿ ಸೈನಿಕ" "ಸಶಸ್ತ್ರ ದಳದ ಸದಸ್ಯ" ಮತ್ತು "ಕುಟುಂಬದ ಸದಸ್ಯ"*** ಎಂಬ ಪದಗಳ ಅರ್ಥವು ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ [ಸಾಮಾನ್ಯ ನೇಮಕಾತಿ] ನಿಯಮಗಳು–1977ರಲ್ಲಿ ವಿವರಿಸಿರುವಂತೆ ಇರುತ್ತದೆ.

## *13 ] ಅಂಗವಿಕಲ ಅಭ್ಯರ್ಥಿಗಳು:*

ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಎಂಎಂಡಬ್ಲ್ಯೂ:107:ಪಿಹೆಚ್‌ಪಿ:2003, ದಿ:11.07.2003 ಮತ್ತು ಸಂಖ್ಯೆ:ಡಿಪಿಎಆರ್:50:ಎಸ್‌ಆರ್‌ಆರ್:2000 ದಿ:30.09.2005ರ ಅನ್ವಯ ತಾನು "ಅಂಗವಿಕಲರ ಗುಂಪಿಗೆ ಸೇರಿದವರೆಂದು ಹೇಳಿಕೊಳ್ಳುವ ಅಭ್ಯರ್ಥಿಯು" ವೈದ್ಯಕೀಯ ಪ್ರಮಾಣ ಪತ್ರವನ್ನು ಹೊಂದಿರಬೇಕು. ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್:ಸಿಆಸು:50:ಎಸ್‌ಆರ್‌ಆರ್:2007, ದಿ:26.07.2011ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ:ಎಂ.ಎ.ಇ:107:ಪಿಹೆಚ್‌ಪಿ:2003 ದಿ:11.07.2003ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಕ್ಷಮ ಜಿಲ್ಲಾ ವೈದ್ಯಕೀಯ ಮಂಡಳಿಯಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:50:ಎಸ್‌ಆರ್‌ಆರ್:2007, ದಿ:26.07.2011ರಲ್ಲಿ ಹಾಗೂ ಸಂಖ್ಯೆ:ಸಿಆಸುಇ:54:ಎಸ್‌ಆರ್‌ಆರ್:2012 ದಿ: 04.08.2012 ರಲ್ಲಿ ರಾಜ್ಯ ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ. ಸದರಿ ಅಧಿಸೂಚನೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತ ಭಾಗವನ್ನು ಈ ಕೆಳಗೆ ನೀಡಲಾಗಿದೆ.

| Blind | Low Vision | Leprosy Cured | Hearing Impaired | Locomotors Disability | Mentally ill | Mentally Retarded |
|---|---|---|---|---|---|---|
| Primary School Music Teacher, Asst Masters (general) (English) (Hindi)<br><br>Secondary School Assistant Grade-II, Assistant Masters [Arts] [Languages] Special Teacher | Primary School Music Teacher, Asst.Masters [General] [English] [Hindi]<br><br>Secondary School Assistant Grade-II, Assistant Masters [Arts] [Languages] Special Teacher | Primary School Assistant Masters [General] [Science] [English] [Hindi] Drawing Teacher<br><br>Secondary School Assistant Grade-II, Assistant Masters [Arts] | Primary School Music Teacher, Asst.Masters [General] [English] [Hindi] Drawing Teachers.<br><br>Secondary School Assistant Grade-II, Assistant Masters [Languages] | Primary School Assistant Masters [General] [Science] [English] [Hindi] Drawing Teacher<br><br>Secondary School Assistant Grade-II, Assistant Masters [Arts] | FDA., SDA., & Group D Posts. | - |

| | | | | | | |
|---|---|---|---|---|---|---|
| Grade-II, Drama Teachers, Dance Teachers, Music Teachers.<br><br>FDA., SDA., | Grade-II, Drama Teachers, Dance Teachers, Music Teachers.<br><br>FDA., SDA., Group D, Posts, Peon. | [Physical Science] [Biological Science] [Languages]<br><br>Special Teacher Grade-II, Drawing Teachers, Drama Teachers, Dance Teachers, Craft Teachers, Music Teachers.<br><br>FDA., SDA., Typist, Steno & Group D., | Physical Education Teacher, Grade-II, Drawing Teachers, Drama Teachers, Dance Teachers, Craft Teachers.<br><br>FDA., SDA., Typist, & Group D., | [Physical Science] [Biological Science] [Languages]<br><br>Special Teacher Grade-II, Drawing Teachers, Drama Teachers, Dance Teachers, Craft Teachers, Music Teachers.<br><br>FDA., SDA., Typist, Steno & Group D Posts. | | |

- ದೈಹಿಕ ಅಂಗವಿಕಲ ಅಭ್ಯರ್ಥಿಗಳು ಸರ್ಕಾರಿ ಜಿಲ್ಲಾ ಆಸ್ಪತ್ರೆಗಳಲ್ಲಿರುವ ಮೂಳೆ ತಜ್ಞ [Orthopaedic Surgeon] ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು Alimco Kanpur [W.H.O Standard] ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ. ಹಾಗೂ ಶ್ರವಣ ದೋಷ ಹೊಂದಿರುವ ಅಂಗವಿಕಲ ಅಭ್ಯರ್ಥಿಗಳ ಪ್ರಮಾಣ ಪತ್ರದಲ್ಲಿ ಶ್ರವಣ ದೋಷದ ಪ್ರಮಾಣವನ್ನು ಡೆಸಿಬಲ್ಸ್ [Decibels] ಗಳಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

**ಅಂಧ ಮತ್ತು ಮಂದ ದೃಷ್ಟಿಯ ಅಭ್ಯರ್ಥಿಗಳಿಗೆ ಈ ಕೆಳಗಿನವರು ಮಾತ್ರ ಅರ್ಹತೆ ಹೊಂದಿರುತ್ತಾರೆ.**

## VISUAL DISABILITY

I Definition : Blindness refers to a condition where a person suffers from any of the condition , namely

i) total absence of sight: or
ii) visual acuity not exceeding 6/60 of 20/200 (snellen) in the better eye with best correcting lenses: or
iii) Limitation of field of vision subtending an angle of 20 degree or worse :

2. **Low Vision**: Persons with low vision means a person with a impairment of vision of less than 6/18 to 6/60 with best correction in the better eye of impairment of field in anyone of the following categories:-

a) reduction of fields less than 50 degrees
b) Heminaopia with macular involvement
c) Altitudinal defect involving lower fields.

3. Categories of Visual Disability All with Correction

| Category | Better Eye | Worse eye | % age impairment |
|---|---|---|---|
| Category 0 | 6/9-6/18 | 6/24 to 6/36 | 20% |
| Category I | 6/18-6/36 | 6/60 to Nil | 40% |
| Category II | 6/40-4/60 Or Field Of vision 10*-20* | 3/60 to Nil | 75% |
| Category III | 3/60 to 1/60 or Field Of vision 10* | F:C at 1 ft to Nil | 100% |
| Category IV | F:C at 1 ft to Nil or Field Of vision 10* | F:C at 1 ft to Nil | 100% |
| One Eyed Persons | 6/6 | F:C at 1 ft to Nil or Field Of vision 10* | 30% |

Note: F:C Means Finger Count

### *14 ] ಗ್ರಾಮೀಣ ಅಭ್ಯರ್ಥಿಗಳು:*

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ-1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964ರಡಿಯಲ್ಲಿ ನಿರ್ಧಿಷ್ಠಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನು ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್:96:ಸೇನೆನಿ:2005, ದಿನಾಂಕ:10.08.2005ರಲ್ಲಿ ನೀಡಿರುವ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.

- ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ-1ರಲ್ಲಿ ಅಂದರೆ, ಮೇಲುಸ್ಥರದಲ್ಲಿ [creamy layer] ಬರುವುದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ ದಿನಾಂಕ:10.08.2005ರಲ್ಲಿ ನಿಗದಿಪಡಿಸಲಾದ ನಮೂನೆ-2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
- ಪ್ರವರ್ಗ-1, 2.ಎ., 2.ಬಿ., 3.ಎ., 3.ಬಿ., ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ ದಿನಾಂಕ:10.08.2005ರಲ್ಲಿ ನಿಗದಿ ಪಡಿಸಲಾದ ನಮೂನೆ-2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದಿರಬೇಕು.

### *15 ] ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿಗಳು:*

ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:23:ಎಸ್‌ಆರ್‌ಆರ್:1999, ದಿನಾಂಕ:23.11.2000ರನ್ವಯ ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿ ಮೀಸಲಾತಿ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ:44:ಸೇನೇನಿ, ದಿನಾಂಕ:27.07.2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ [ತಹಸೀಲ್ದಾರ್] ಅರ್ಜಿ ಸಲ್ಲಿಸುವ ಕೊನೆ ದಿನಾಂದೊಳಗೆ ಪಡೆದಿರಬೇಕು.

### *ಯೋಜನೆ ಅಂದರೆ:*

ನಿರಾಶ್ರಿತ ವ್ಯಕ್ತಿಗಳಿಂದ ಪಡೆಯಲಾದ ಜಮೀನನ್ನು ನಿರ್ಮಾಣ ಅಥವಾ ನೀರಾವರಿಯ ಉದ್ದೇಶಕ್ಕಾಗಿ ಅಥವಾ ನೀರು ಸರಬರಾಜು ಮಾಡುವ ಅಭಿವೃದ್ಧಿ ಕಾರ್ಯದ ವಿಸ್ತರಣೆ ಅಥವಾ ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ಪೂರೈಕೆ ಅಥವಾ ವಿದ್ಯುಚ್ಛಕ್ತಿ ಕಾರ್ಯಗಳ ಅನುಕೂಲಕರ ಅಭಿವೃದ್ಧಿಯೂ ಸೇರಿದಂತೆ ಸಾರ್ವಜನಿಕ ಉಪಯೋಗಗಳಿಗಾಗಿ ನಿರ್ಮಾಣ ಸುಧಾರಣೆ ಅಥವಾ ಅಭಿವೃದ್ಧಿ ಕಾರ್ಯಗಳ ಯೋಜನೆ.

### *ವಿಶೇಷ ಸೂಚನೆ:*

ಈ ಮೇಲ್ಕಂಡ ನಿಯಮಗಳು ಪ್ರಾರಂಭವಾಗುವುದಕ್ಕಿಂತ 20 ವರ್ಷಗಳ ಮುಂಚಿತವಾಗಿ ಯಾವುದೇ ಗ್ರಾಮೀಣದಲ್ಲಿನ ಅಥವಾ ಪ್ಲಾಟ್ ಅಥವಾ ಇನ್ನಿತರ ಯಾವುದೇ ಆಸ್ತಿಗಳನ್ನು ಹೊಂದಿದ್ದು, ಅಂತಹ ಅಸ್ತಿಗಳನ್ನು ಯೋಜನೆಗಳ ಉದ್ದೇಶಕ್ಕಾಗಿ ಉಪಯೋಗಿಸಿಕೊಂಡಿದ್ದಲ್ಲಿ, ಅಂತಹ ಜಮೀನುಗಳನ್ನು ಸ್ವಾಧೀನಪಡಿಸಿಕೊಂಡ ಕಾರಣದಿಂದಾಗಿ ನಿರಾಶ್ರಿತರಾದ ಕುಟುಂಬದ ಸದಸ್ಯರು / ವ್ಯಕ್ತಿಗಳು ಈ ನಿಯಮಗಳಿಗೆ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.

ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ:44: ಸೇನೇನಿ ದಿನಾಂಕ:27.07.2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

### *16 ] ಕನ್ನಡ ಮಾಧ್ಯಮದ ಅಭ್ಯರ್ಥಿಗಳು:*

1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳೂ ಈ ಮೀಸಲಾತಿಗೆ ಅರ್ಹರಾಗುತ್ತಾರೆ. [1ನೇ ತರಗತಿಗೆ ದಾಖಲಾಗದೇ ನೇರವಾಗಿ ನಂತರದ ಹೆಚ್ಚಿನ ತರಗತಿಗೆ ದಾಖಲಾಗಿ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಸಹ ಈ ಸೌಲಭ್ಯಕ್ಕೆ ಅರ್ಹರಾಗುವರು] ಈ ಅಭ್ಯರ್ಥಿಗಳು ಸಂಬಂಧಿಸಿದ ಮುಖ್ಯೋಪಾಧ್ಯಾಯರಿಂದ ದೃಢೀಕೃತ ಪ್ರಮಾಣ ಪತ್ರಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳವರ

ಮೇಲುಸಹಿಯೊಂದಿಗೆ ಸಲ್ಲಿಸತಕ್ಕದ್ದು. ಪ್ರಮಾಣ ಪತ್ರಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳವರ ಮೇಲು ಸಹಿಯೊಂದಿಗೆ ಸಲ್ಲಿಸತಕ್ಕದ್ದು. ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

### *17 ] ಗೌರವ ಶಿಕ್ಷಕರ ಪ್ರಮಾಣ ಪತ್ರ:*

ಸರ್ಕಾರಿ ಶಾಲೆಗಳಲ್ಲಿ ಗೌರವ ಶಿಕ್ಷಕರಾಗಿ ಸಲ್ಲಿಸಿದ ಸೇವಾ ಅವಧಿಗೆ ಕೃಪಾಂಕ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ಶಾಲೆಯ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಆಯಾ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರಿಂದ ದೃಡೀಕರಿಸಿಕೊಂಡಿರಬೇಕು. ಸದರಿ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

### *18 ] ಅಭ್ಯರ್ಥಿಗಳ ಮಾಹಿತಿ ಸಂಬಂಧ ಆಕ್ಷೇಪಣೆ ಸ್ವೀಕರಿಸಿ ದಾಖಲಿಸುವುದು:*

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳು, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳು ಹಾಗೂ ಅಭ್ಯರ್ಥಿಯು ಅರ್ಜಿಯಲ್ಲಿ ಕ್ಲೇಮು ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ಎಲ್ಲಾ ಅಭ್ಯರ್ಥಿಗಳ ವಿವರಗಳನ್ನು ಅಂದರೆ, ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳು, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳು ಹಾಗೂ ಆನ್‌ಲೈನ್ ಅರ್ಜಿಯಲ್ಲಿ ಕ್ಲೇಮು ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖಾ ವೆಬ್‌ಸೈಟ್ http://schooleducation.kar.nic.in ನಲ್ಲಿ ಪ್ರಕಟಿಸಿ, ನಿಗದಿತ ಸಮಯ ನೀಡಿ ಆಕ್ಷೇಪಣೆಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗುವುದು. ಅಭ್ಯರ್ಥಿಯು ಆನ್‌ಲೈನ್ ಮೂಲಕ ಸಲ್ಲಿಸಿರುವ ಅರ್ಜಿಯಲ್ಲಿ ದಾಖಲಿಸಿದ ಶೈಕ್ಷಣಿಕ ಮಾಹಿತಿಯಲ್ಲಿ ವ್ಯತ್ಯಾಸವಾಗಿದ್ದಲ್ಲಿ ಮಾತ್ರ ನಿಗದಿತ ನಮೂನೆಯಲ್ಲಿ ಆಕ್ಷೇಪಣೆಗಳನ್ನು ಸಲ್ಲಿಸಬೇಕಾಗುತ್ತದೆ. ಆದರೆ, ಮೂಲ ಅರ್ಜಿಯಲ್ಲಿ ದಾಖಲಿಸದಿರುವ ಯಾವುದೇ ಮಾಹಿತಿಯನ್ನು ಪರಿಗಣಿಸಲಾಗುವುದಿಲ್ಲ. ಆಕ್ಷೇಪಣೆಗಳನ್ನು ನಿಯಮಾನುಸಾರ ಪರಿಶೀಲಿಸಿ, ಅಭ್ಯರ್ಥಿಗಳು ನೀಡಿದ ಶೈಕ್ಷಣಿಕ ದಾಖಲೆಗಳ ಆಧಾರದ ಮೇಲೆ ಪರಿಷ್ಕರಿಸಿ, ಪುನಃ ಇಲಾಖಾ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.

### *19 ] ಆಯ್ಕೆ ಪಟ್ಟಿ ತಯಾರಿಸುವ ವಿಧಾನ:*

ಆಯ್ಕೆ ಪಟ್ಟಿಯನ್ನು ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ತಯಾರಿಸಲಾಗುತ್ತದೆ. ಅರ್ಹತೆ ಮತ್ತು ಮೀಸಲಾತಿ ಬಗ್ಗೆ ವಿವರಗಳನ್ನು ಈಗಾಗಲೇ ನೀಡಿದೆ. ಆಯ್ಕೆ ಪಟ್ಟಿಯನ್ನು ಎರಡು ಹಂತಗಳಲ್ಲಿ ತಯಾರಿಸಲಾಗುತ್ತದೆ.

- ***ಮೊದಲ ಹಂತ:*** ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆಗಳ ಆಹ್ವಾನ.
- ***ಎರಡನೇ ಹಂತ:*** ಮೂಲ ಪ್ರಮಾಣ ಪತ್ರಗಳ ಪರಿಶೀಲನೆ ಮತ್ತು ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆ.

### *ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆಗಳ ಆಹ್ವಾನ:*

ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿ ಅಭ್ಯರ್ಥಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗುತ್ತದೆ. ಆಕ್ಷೇಪಣೆಗಳನ್ನು ಸಲ್ಲಿಸಲು ಅಂತಿಮ ದಿನಾಂಕವನ್ನು ನಿಗದಿಪಡಿಸಲಾಗುತ್ತದೆ. ಈ ಬಗ್ಗೆ ಸೂಚನೆಯನ್ನು ದಿನಪತ್ರಿಕೆಗಳಲ್ಲಿ ನೀಡಲಾಗುತ್ತದೆ. ಅಭ್ಯರ್ಥಿಗಳು ತಮ್ಮ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ ಹಾಗೂ ಈ ಬಗ್ಗೆ ಯಾವುದೇ ಸೂಚನೆ ನೀಡಿರುವುದಿಲ್ಲ. ಇದೇ ರೀತಿ ಯಾವುದೇ ಅಭ್ಯರ್ಥಿ ಆಕ್ಷೇಪಣೆಗಳನ್ನು ಸಲ್ಲಿಸದಿದ್ದಲ್ಲಿ ಅಂತಿಮ ಆಯ್ಕೆ ಪಟ್ಟಿಯಲ್ಲಿ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹತೆ ಪಡೆಯುವುದಿಲ್ಲ. ಹಾಗೂ ಅಂತಿಮ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಮತ್ತೆ ಅವರ ಅರ್ಹತೆಯ ಪರಿಶೀಲನೆಗಾಗಲೀ ಅಥವಾ ಇನ್ನಾವುದೇ ಬಗೆಯ ಪರಿಹಾರಕ್ಕಾಗಲೀ ಅರ್ಹತೆ ಪಡೆಯುವುದಿಲ್ಲ.

### *20 ] ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆ:*

- ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದಾಗ ಪ್ರತಿ ಅಭ್ಯರ್ಥಿ ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸಬೇಕೆಂದು ಪ್ರಕಟಣೆಯಲ್ಲಿ ತಿಳಿಸಲಾಗಿರುತ್ತದೆ. ಇದರಂತೆ ಅಭ್ಯರ್ಥಿಗಳು ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕೃತಿ ಮತ್ತು ಗುರುತಿನ ಪತ್ರದ ಪ್ರತಿ ಸಹಿತ ಪರಿಶೀಲನೆಗೆ ಸಲ್ಲಿಸಬೇಕು. ***ಅಭ್ಯರ್ಥಿಗಳಿಗೆ ಈ ಬಗ್ಗೆ ವೈಯಕ್ತಿಕವಾಗಿ ಸೂಚನೆ ನೀಡಲಾಗುವುದಿಲ್ಲ.*** ಮೂಲ ದಾಖಲೆ / ಪ್ರಮಾಣ ಪತ್ರಗಳನ್ನು ಸಲ್ಲಿಸದಿರುವ / ಕೌನ್ಸಿಲಿಂಗ್ ಗೈರು ಹಾಜರಾಗುವ / ಅಪೂರ್ಣ ದಾಖಲೆಗಳನ್ನು ಅಭ್ಯರ್ಥಿಗಳು ಅಂತಿಮ ಆಯ್ಕೆಪಟ್ಟಿಯಲ್ಲಿ ಅವಕಾಶವನ್ನು ಕಳೆದುಕೊಳ್ಳುತ್ತಾರೆ.

- ಜಿಲ್ಲಾ ಮಟ್ಟದ ಅಂತಿಮ ಆಯ್ಕೆಪಟ್ಟಿಯಿಂದ ಬ್ಲಾಕ್ ಮಟ್ಟದ ಆಯ್ಕೆಪಟ್ಟಿಯನ್ನು ಅಭ್ಯರ್ಥಿಗಳು ಅರ್ಜಿಯಲ್ಲಿ ಸೂಚಿಸಿರುವ ಬ್ಲಾಕ್‌ಗಳ ಆದ್ಯತೆಯ ಆಧಾರದ ಮೇಲೆ ತಯಾರಿಸಲಾಗುತ್ತದೆ. ಅಭ್ಯರ್ಥಿಗಳು ಅರ್ಜಿಯಲ್ಲಿ ಬ್ಲಾಕ್‌ಗಳ ಆದ್ಯತೆಯನ್ನು ಸರಿಯಾಗಿ ನಮೂದಿಸಬೇಕು.
- ಬ್ಲಾಕ್ ಮಟ್ಟದ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಪ್ರಾಧಿಕಾರಿಗಳಾದ ಕ್ಷೇತ್ರ ಶಿಕ್ಷಣಾಧಿಕಾರಿಗಳು ಕೌನ್ಸಿಲಿಂಗ್ ಮೂಲಕ ನೇಮಕಾತಿ ಆದೇಶ ನೀಡುತ್ತಾರೆ.

### *21 ] ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ವಿವರಗಳು:*

***ಅ. ಪರೀಕ್ಷೆಯ ಹೆಸರು:*** ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿಯರ ಹುದ್ದೆಗಳ ನೇಮಕಾತಿಗೆ ನಡೆಸುವ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಪ್ರತಿಯೊಂದಿಗೆ ಅಭ್ಯರ್ಥಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾಗುವುದು ಕಡ್ಡಾಯವಾಗಿರುತ್ತದೆ.

***ಆ. ಪರೀಕ್ಷೆ ನಡೆಸುವ ಪ್ರಾಧಿಕಾರ:*** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಆಯ್ಕೆ ಪ್ರಾಧಿಕಾರ ಹಾಗೂ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ತಮ್ಮ ಶೈಕ್ಷಣಿಕ ಜಿಲ್ಲೆಯ ವ್ಯಾಪ್ತಿಯಲ್ಲಿ ನಡೆಸುವರು.

**ಇ.** ಪರೀಕ್ಷೆ ನಡೆಸುವ ದಿನಾಂಕ : 23-05-2015 ಮತ್ತು 24-05-2015

***ಈ. ಪರೀಕ್ಷಾ ಅವದಿ ಹಾಗೂ ಸಮಯ:***

**ದಿ:23-05-2015** ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 01.00 ಗಂಟೆ. ***( 1-***5ನೇ ತರಗತಿ ಶಿಕ್ಷಕರಿಗೆ),

**ದಿ:23-05-2015** ಮಧ್ಯಾಹ್ನ 2.30 ರಿಂದ 05.00 ಗಂಟೆ.***(6-8*** ನೇ ತರಗತಿಗೆ ಪೇಪರ್-1)

**ದಿ:24-05-2015** ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 01.00 ಗಂಟೆ ***(6-8*** ನೇ ತರಗತಿಗೆ ಪೇಪರ್-2 ಸಾಮಾನ್ಯ ಹುದ್ದೆಗೆ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳಿಗೆ

**ದಿ:24-05-2015** ಮಧ್ಯಾಹ್ನ 2.30 ರಿಂದ 05.00 ಗಂಟೆ. ***(6-8*** ನೇ ತರಗತಿಗೆ ಪೇಪರ್-2) ಆಂಗ್ಲ ಭಾಷಾ ಹುದ್ದೆಗೆ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳಿಗೆ

**ಸೂಚನೆ:6-8ನೇ ತರಗತಿ ಶಿಕ್ಷಕರ ಹುದ್ದಗೆ ಅರ್ಜಿಸಲ್ಲಿಸಿರುವರು ಪೇಪರ್-1 ಮತ್ತು ಪೇಪರ್-2 ಎರಡಕ್ಕೂ ಕಡ್ಡಾಯವಾಗಿ ಹಾಜರಾಗಬೇಕು.**

***ಉ. ಪ್ರಶ್ನೆ ಪತ್ರಿಕೆಯಲ್ಲಿನ ವಿಷಯ ಹಾಗೂ ಅಂಕಗಳು :*** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಪ್ರತಿ ಪತ್ರಿಕೆಗೆ ಕೋಷ್ಠಕದಲ್ಲಿ ಸೂಚಿಸಿರುವಂತೆ ಒಟ್ಟು 150 ಅಂಕಗಳನ್ನು ನಿಗದಿಪಡಿಸಲಾಗಿದೆ. ಪ್ರಸ್ತುತ ನಡೆಯುತ್ತಿರುವ ಪರೀಕ್ಷೆ ಎನ್.ಸಿ.ಟಿ.ಇ., ನಿಗದಿ ಪಡಿಸಿರುವ ವಿದ್ಯಾರ್ಹತೆ, ಶಿಕ್ಷಕರ ಅರ್ಹತಾ ಪರೀಕ್ಷೆ ಸ್ವರೂಪವನ್ನು ಅನುಸರಿಸಿ ನಡೆಸಲಾಗುವುದು.

***ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ ಕೆಳಗಿನಂತಿದೆ.(1-5ನೇ ತರಗತಿ)***

| ಕ್ರ.ಸಂ | ವಿಷಯ | ಅಂಕಗಳು |
|---|---|---|
| 01. | ಸಾಮಾನ್ಯ ಜ್ಞಾನ(ಪ್ರಚಲಿತ ವಿದ್ಯಾಮಾನಗಳು) | 15 |
| 02. | ಶಿಶು ಮನೋವಿಜ್ಞಾನ ಮತ್ತು ವಿಕಸನ. ಬೋದನಾ ಸಾಮರ್ಥ್ಯ | 25 |
| 03. | ಬಾಷೆ: ಕನ್ನಡ / ಉರ್ದು/ಮರಾಠಿ /ತಮಿಳು /ತೆಲಗು | 20 |
| 04. | ಸಾಮಾನ್ಯ ಆಂಗ್ಲ ಭಾಷೆ | 25 |
| 05. | ಪರಿಸರ ಅಧ್ಯಯನ [ವಿಜ್ಞಾನ ಮತ್ತು ಸಮಾಜ ವಿಜ್ಞಾನ] | 20 |
| 06 | ಗಣಿತ | 20 |
| 07 | ಗಣಕ ಯಂತ್ರ ಪ್ರಬುದ್ದತೆ ಬಗ್ಗೆ | 25 |
| | ಒಟ್ಟು | 150 |

**ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ (6–8ನೇ ತರಗತಿ) ಪೇಪರ್–1**

| ಕ್ರ.ಸಂ | ವಿಷಯ | ಅಂಕಗಳು |
|---|---|---|
| 01. | ಸಾಮಾನ್ಯ ಜ್ಞಾನ(ಪ್ರಚಲಿತ ವಿದ್ಯಾಮಾನಗಳು) | 30 |
| 02. | ಶೈಕ್ಷಣಿಕ ಮನೋವಿಜ್ಞಾನ ಮತ್ತು ವಿಕಸನ. | 40 |
| 03. | ಸಾಮಾನ್ಯ ಆಂಗ್ಲ ಭಾಷೆ | 25 |
| 04. | ಮೌಲ್ಯಶಿಕ್ಷಣ ಮತ್ತು ಆರೋಗ್ಯ ಶಿಕ್ಷಣ | 30 |
| 05. | ಗಣಕ ಯಂತ್ರ ಪ್ರಬುದ್ದತೆ ಬಗ್ಗೆ | 25 |
| | ಒಟ್ಟು | 150 |

**ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ (6–8ನೇ ತರಗತಿ) ಪೇಪರ್–2**
**ಕನ್ನಡ /ಉರ್ದು/ಮರಾಠಿ/ತೆಲುಗು/ತಮಿಳ್ ಸಾಮಾನ್ಯ ಶಿಕ್ಷಕರಿಗೆ ಮಾತ್ರ**

| ಕ್ರ.ಸಂ | ವಿಷಯ | ಅಂಕಗಳು |
|---|---|---|
| 01. | ಆಯಾ ಭಾಷೆ ಮತ್ತು ಬೋಧನಾ ಸಾಮರ್ಥ್ಯ | 75 |
| 02. | ಸಮಾಜ ವಿಜ್ಞಾನ , ವಿಷಯ ಜ್ಞಾನ ಮತ್ತು ಬೋಧನಾ ಸಾಮರ್ಥ್ಯ | 75 |
| | ಒಟ್ಟು | 150 |

**ವಿಷಯ ಮತ್ತು ನಿಗದಿಪಡಿಸಿರುವ ಗರಿಷ್ಠ ಅಂಕಗಳ ವಿಂಗಡಣೆ (6–8ನೇ ತರಗತಿ) ಪೇಪರ್–2**
**ಆಂಗ್ಲ ಭಾಷಾ ಶಿಕ್ಷಕರಿಗೆ ಮಾತ್ರ**

| ಕ್ರ.ಸಂ | ವಿಷಯ | ಅಂಕಗಳು |
|---|---|---|
| 01. | ಆಂಗ್ಲ ಭಾಷೆ –ವಿಷಯ ಜ್ಞಾನ | 100 |
| 02. | ಆಂಗ್ಲ ಭಾಷೆ ಬೋಧನಾ ಸಾಮರ್ಥ್ಯ | 50 |
| | ಒಟ್ಟು | 150 |

***22 ] ಪರೀಕ್ಷಾ ವಿಷಯಗಳಿಗೆ ನಿಗದಿಪಡಿಸಿರುವ ಪಠ್ಯವಸ್ತು: [ಎನ್.ಸಿ.ಟಿ.ಇ., ನಿಗಧಿಪಡಿಸಿರುವ ಪರೀಕ್ಷಾ ಪಠ್ಯ ಕ್ರಮದಂತೆ]***

***01.*** ಭಾಷೆ : ಕನ್ನಡ, ಉರ್ದು, ಮರಾಠಿ, ತಮಿಳು, ತೆಲಗು.

***02.*** ಆಂಗ್ಲ ಭಾಷೆ, [4] ಪರಿಸರ ಅಧ್ಯಯನ [ವಿಜ್ಞಾನ ಮತ್ತು ಸಮಾಜ ವಿಜ್ಞಾನ] [5] ಗಣಿತ.

***03.*** ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ.

***ಅ.*** ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿ ಬರುತ್ತದೆ.
***1–***5ನೇ ತರಗತಿ ಪಿ,ಯು,ಸಿ ಮಟ್ಟದ ಜ್ಞಾನ ಹಾಗೂ ***6–8*** ನೇ ತರಗತಿ ಪದವಿ ಮಟ್ಟದ ಜ್ಞಾನ

***ಆ.*** ಪ್ರಶ್ನಗಳು ವಸ್ತುನಿಷ್ಠವಾಗಿದ್ದು ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.

***ಇ.*** ಪ್ರತಿ ಪ್ರಶ್ನೆ ನಾಲ್ಕು ಉತ್ತರಗಳನ್ನು ಹೊಂದಿದ್ದು, ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.

***ಈ.*** ಉತ್ತರಗಳನ್ನು 'ಓ.ಎಂ.ಆರ್' ಶೀಟಿನಲ್ಲಿ ಗುರುತಿಸುವುದು.

***ಉ.*** ಪ್ರಶ್ನೆ ಪತ್ರಿಕೆಗಳು ಆಯಾ ಭಾಷೆಯನ್ನು ಹೊರತುಪಡಿಸಿ ಉಳಿದ ವಿಷಯಗಳು ಕನ್ನಡ ಮತ್ತು ಆಂಗ್ಲ ಭಾಷೆಗಳಲ್ಲಿ ಇರುತ್ತದೆ.

***23 ] ಪ್ರಮುಖವಾದ ಸೂಚನೆಗಳು:***

***01.*** ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿ ಸಲ್ಲಿಸದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ಆಯ್ಕೆಗೆ ಪರಿಗಣಿಸುವುದಿಲ್ಲ. ಅಭ್ಯರ್ಥಿಗಳು ಪ್ರವೇಶ ಪತ್ರವನ್ನು ಆನ್‌ಲೈನ್ ಮೂಲಕವೇ ಪಡೆಯತಕ್ಕದ್ದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಹಾಜರಾದ ಮಾತ್ರಕ್ಕೆ ಅಭ್ಯರ್ಥಿ ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಭ್ಯರ್ಥಿಯು ಇದರ ಜೊತೆಗೆ ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿ ಹೊಂದಿರತಕ್ಕದ್ದು.

***02.*** ಅರ್ಜಿಗಳನ್ನು ದಿನಾಂಕ: 27–04–2015ರೊಳಗೆ ಆನ್‌ಲೈನ್ ಮೂಲಕವೇ ಸಲ್ಲಿಸಬೇಕು. ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ. ಅಂಚೆ ಮೂಲಕ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

*03.* ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಸಮಯಕ್ಕೆ ***ಎಲ್ಲಾ ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದ ಮೊದಲೇ ಪಡೆದಿರಬೇಕು.*** ಆದರೆ, ತಾತ್ಕಾಲಿಕ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ ಆಯ್ಕೆ ಹೊಂದಿದ್ದಲ್ಲಿ ಅಥವಾ ಆಕ್ಷೇಪಣೆ ನೀಡುವ ಹಂತದಲ್ಲಿ ಎಲ್ಲಾ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಆಯ್ಕೆ ಪ್ರಾಧಿಕಾರಕ್ಕೆ ಸಲ್ಲಿಸಬೇಕು.

*04.* ಅಭ್ಯರ್ಥಿಗಳು ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ ಭಾವಚಿತ್ರವನ್ನು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿ ನಮೂನೆಯಲ್ಲಿ ನಿಗದಿಪಡಿಸಿರುವ ಸ್ಥಳದಲ್ಲಿಯೇ ಸ್ಕ್ಯಾನ್ ಮಾಡಿ ಸಲ್ಲಿಸುವುದು.

*05.* ಪ್ರಮಾಣ ಪತ್ರಗಳು ಪರಿಶೀಲನೆಯ ಸಮಯದಲ್ಲಿ ***ಸುಳ್ಳು ದಾಖಲೆ ಅಥವಾ ಸುಳ್ಳು ಮಾಹಿತಿ ನೀಡಿರುವುದು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಯಾಗುವ ಅವಕಾಶವನ್ನು ಕಳೆದುಕೊಳ್ಳುತ್ತಾರೆ.***

*06.* ಆಯ್ಕೆಪಟ್ಟಿಯಲ್ಲಿ ಸೇರ್ಪಡೆಯಾದ ಮಾತ್ರಕ್ಕೆ ಅಭ್ಯರ್ಥಿಗಳ ನೇಮಕಾತಿಗೆ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.

*07.* ಮೇಲಿನ ನೇಮಕಾತಿಗಳು ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

*08.* ಯಾವುದೇ ಹಂತದಲ್ಲಿ ತಪ್ಪು ಮಾಹಿತಿಯ ಆಧಾರದ ಮೇಲೆ ಆಯ್ಕೆಯಾದ ಅಥವಾ ಅನರ್ಹತೆಯ ಕಾರಣಗಳಿಗಾಗಿ ಅಭ್ಯರ್ಥಿಯ ಹೆಸರನ್ನು ಪಟ್ಟಿಯಿಂದ ಕೈಬಿಡುವ ಅಥವಾ ನೇಮಕಾತಿ ಆದೇಶವನ್ನು ರದ್ದುಗೊಳಿಸುವ ಅಧಿಕಾರವನ್ನು ಇಲಾಖೆಯು ಕಾಯ್ದಿರಿಸಿಕೊಂಡಿರುತ್ತದೆ.

*09.* ಆಯ್ಕೆಯಾದ ಅಭ್ಯರ್ಥಿಯು ತಾನು ನೇಮಕಗೊಂಡ ನೇಮಕಾತಿ/ಜೇಷ್ಠತಾ ಘಟಕ [ತಾಲ್ಲೂಕು]ದಲ್ಲಿ ಕನಿಷ್ಠ 10 ವರ್ಷಗಳ ಸೇವೆಯನ್ನು ಪೂರೈಸಿರಬೇಕು. ಇಲ್ಲವಾದಲ್ಲಿ ಘಟಕದ ಹೊರಗಿನ ವರ್ಗಾವಣೆಗೆ ಅವಕಾಶವಿರುವುದಿಲ್ಲ. ಈ ಷರತ್ತಿಗೆ ಬದ್ಧರಾಗಿವರು ಮಾತ್ರ ನೇಮಕಾತಿಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು .

*10.* ಅಭ್ಯರ್ಥಿಗಳು ಅವರ ಅರ್ಜಿಗಳಲ್ಲಿ ಭರ್ತಿ ಮಾಡಿರುವ ಮಾಹಿತಿಗಳ ಆಧಾರದ ಮೇಲೆ ಅವರಿಗೆ ಸ್ಪರ್ಧಾತ್ಮಕ ಪರೀಕ್ಷೆ ಬರೆಯಲು ಪ್ರವೇಶ ಪತ್ರಗಳನ್ನು ನೀಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಅಂಕಗಳ ಮಾಹಿತಿ, ಮೀಸಲಾತಿ, ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದ ಅಥವಾ ತಪ್ಪು ಮಾಹಿತಿ ನೀಡಿದ ಸಂದರ್ಭಗಳಲ್ಲಿ ಮುಂದಿನ ಆಗುಹೋಗುಗಳಿಗೆ ಅಭ್ಯರ್ಥಿಗಳೇ ಜವಾಬ್ದಾರರು.

*11.* ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಹಾಗೂ ವಯೋಮಿತಿ ಸಡಿಲಿಕೆ ಇತ್ಯಾದಿಗಳಿಗೆ ಸಂಬಂಧಿತ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು. ಈ ಬಗ್ಗೆ ಅನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಮನವಿ ಪತ್ರಗಳನ್ನು ಪುರಸ್ಕರಿಸಲಾಗುವುದಿಲ್ಲ.

*12.* ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

*13.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವಾಗ ಪ್ರವೇಶ ಪತ್ರ, ಸ್ವೀಕೃತಿ ಪತ್ರ ಹಾಗೂ ಇತರೆ ದಾಖಲೆಗಳನ್ನು ಆಯ್ಕೆ ಪ್ರಕ್ರಿಯೆ ಮುಗಿಯುವ ತನಕ ಸುರಕ್ಷಿತವಾಗಿ ಇಟ್ಟುಕೊಳ್ಳತಕ್ಕದ್ದು. ಈ ಅರ್ಜಿಯನ್ನು ಭರ್ತಿ ಮಾಡುವ ವಿಧಾನ, ಮೀಸಲಾತಿ ಪ್ರಮಾಣ ಪತ್ರಗಳ ನಮೂನೆ, ಮೀಸಲಾತಿಯ [Horizontal and vertical Reservations] ವಿವರ ಹಾಗೂ ಸರ್ಕಾರಿ ಆದೇಶಗಳ ಬಗ್ಗೆ ಮಾಹಿತಿ ನೀಡಲಾಗಿದ್ದು, ಅಭ್ಯರ್ಥಿಗಳು ಅವುಗಳನ್ನು ಗಮನವಿಟ್ಟು ಓದಿಕೊಳ್ಳತಕ್ಕದ್ದು.

*14.* ದುರ್ನಡತೆ: ಒಬ್ಬ ಅಭ್ಯರ್ಥಿಯು ನಕಲು ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯ್ಕೆ ಪ್ರಾಧಿಕಾರದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದೇ ಅಲ್ಲದೇ, ಆಯ್ಕೆ ಪ್ರಾಧಿಕಾರವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

*15.* ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. [ಅರ್ಜಿಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ] ನಮೂದಿಸಲು ಬಿಟ್ಟುಹೋಗಿದ್ದ ಯಾವುದೇ ಮಾಹಿತಿಯನ್ನು ಹೊಸದಾಗಿ ದಾಖಲಿಸಲು

ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೇ ತಿರಸ್ಕರಿಸಲಾಗುವುದು.

*16.* ಅರ್ಜಿ ನಮೂನೆ, ಉತ್ತರ ಪತ್ರಿಕೆ, ಪ್ರವೇಶ ಪತ್ರಗಳ ನಿಗದಿತ ಸ್ಥಳಗಳಲ್ಲಿ ಎಡಗೈ ಹೆಬ್ಬೆಟ್ಟು ಗುರುತನ್ನು ಸ್ಪಷ್ಟವಾಗಿ ಹಾಕಬೇಕು. ಎಡಗೈ ಹೆಬ್ಬೆರಳ ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.

*17.* ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ ಪ್ರವೇಶ ಪತ್ರದ ಪ್ರತಿಯನ್ನು ದ್ವಿಪ್ರತಿಯಲ್ಲಿ ಡೌನ್‌ಲೋಡ್ ಮಾಡಿಕೊಂಡು ಆ ಪ್ರತಿಗಳಲ್ಲಿ ಒಂದೇ ಮಾದರಿಯ ಇತ್ತೀಚಿನ ತಲಾ ಒಂದು ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು.

*18.* ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಈ ಸಂಬಂಧ ಆಯ್ಕೆ ಪ್ರಾಧಿಕಾರಿ / ನೇಮಕಾತಿ ಪ್ರಾಧಿಕಾರಿಗಳು ನೀಡುವ ಸೂಚನೆಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ನಲ್ಲಿ ಅವಲೋಕಿಸುವುದು.

*19.* ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗೆ ನಡೆಸಲಾಗುವ ಸ್ಪರ್ಧಾತ್ಮಕ ಪರೀಕ್ಷೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಕಡ್ಡಾಯವಾಗಿ 10ನೇ ತರಗತಿಯ ಪಠ್ಯದ ಆಂಗ್ಲ ಭಾಷೆಯ ಜ್ಞಾನ ಹಾಗೂ ಸಾಮಾನ್ಯ ಕಂಪೂಟರ್ ಜ್ಞಾನವನ್ನು ಫಂಡಮೆಂಟಲ್ಸ್, ಎಂ.ಎಸ್.ವಿಂಡೋಸ್, ಎಂ.ಎಸ್.ವರ್ಡ್, ಎಂ.ಎಸ್.ಎಕ್ಸೆಲ್, ಫವರ್ ಪಾಯಿಂಟ್ ಬಗ್ಗೆ ಹೊಂದಿರತಕ್ಕದ್ದು.

***20.*** ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 43 ಹೆಚ್‌ಕೆಸಿ 2013 ದಿನಾಂಕ: 29/01/2014 ರನ್ವಯ ರಚಿಸಲಾಗಿರುವ ಕರ್ನಾಟಕ ಸಾರ್ವಜನಿಕ ಉದ್ಯೋಗ(ಹೈದರಾಬಾದ–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ)(ಸ್ಥಳೀಯ ವೃಂದಗಳ ರಚನೆ, ಹಂಚಿಕೆ ಮತ್ತು ವ್ಯಕ್ತಿಗಳ ವರ್ಗಾವಣೆ) ನಿಯಮಗಳು, 2013 ರನ್ವಯ ವೃಂದ ನಿರ್ವಹಣಾ ಪ್ರಧಿಕಾರ ವ್ಯಾಪ್ತಿಗೆ ಸೇರಿದ ಹುದ್ದೆಗಳನ್ನು ಮೂಲ ವೃಂದದಿಂದ ಪ್ರಾದೇಶಿಕ ಸ್ಥಳೀಯ ವೃಂದವನ್ನು ರಚಿಸಿ ಸಮೂಹ ಸಮೂಹ ಸಿ ಹುದ್ದೆಗಳಲ್ಲಿ ಶೇಕಡಾ 80% ರಷ್ಟು ಹುದ್ದೆಗಳನ್ನು ಸ್ಥಳೀಯ ಅಭ್ಯರ್ಥಿಗಳಿಗೆ ಹಾಗೂ ಉಳಿದ ಮೂಲ ವೃಂದಕ್ಕೆ ಶೇಕಡಾ 20% ರಷ್ಟು ಹುದ್ದೆಗಳನ್ನು ನೀಡುವ ಅವಕಾಶ ಕಲ್ಪಿಸಲಾಗಿದೆ.

ಅದರಂತೆ ಸಮೂಹ ಸಿ ವೃಂದಕ್ಕೆ ಸೇರಿದ 1 ರಿಂದ 5ನೇ ತರಗತಿಯ ಹಾಗೂ 6 ರಿಂದ 8ನೇ ತರಗತಿಯ ಸರ್ಕಾರಿ ಪ್ರಾಥಮಿಕ ಶಾಲಾ ಸಹಶಿಕ್ಷಕರ ವೃಂದದ ನಿರ್ವಹಣಾ ಪ್ರಾದಿಕಾರ/ನೇಮಕಾತಿ ಪ್ರಾಧಿಕಾರಿಗಳಾಧ ಸಾರ್ವಜನಿಕ ಶಿಕ್ಷಣ ಇಲಾಖೆಯ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಆಯಾ ತಾಲ್ಲೂಕುಗಳಲ್ಲಿ ಮಂಜೂರಾಗಿರುವ ವಿವಿಧ ವಿಷಯ ಹಾಗೂ ಮಾಧ್ಯಮದ 1 ರಿಂದ 5ನೇ ತರಗತಿಯ ಸರ್ಕಾರಿ ಪ್ರಾಥಮಿಕ ಶಾಲಾ ಸಹ ಶಿಕ್ಷಕರ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರಿಗೆ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 33 ಹೆಚ್‌ಕೆಪಿ 2014 ದಿನಾಂಕ: 10/04/2014 ರಲ್ಲಿ ವಿವರಿಸಿದಂತೆ ಮೂಲ ವೃಂದದಿಂದ ಸ್ಥಳೀಯ ವೃಂದವನ್ನು ರಚಿಸಿದ ನಂತರ ಎರಡು ಪ್ರತ್ಯೇಕ ವೃಂದಗಳಲ್ಲಿ ಬಿಟ್ಟು ಹೋದ ರೋಸ್ಟರ್ ಬಿಂದುಗಳಲ್ಲಿನ ಹುದ್ದೆಗಳನ್ನು ಪ್ರಕಟಿಸಿ ರೋಸ್ಟರ್‌ನಲ್ಲಿ ಆಗಿರುವ ಅಸಮಾನತೆಯನ್ನು ಸರಿದೂಗಿಸುವ ಕ್ರಮ ಅನುಸರಿಸಲಾಗಿದೆ. ಹಾಗೂ 6 ರಿಂದ 8ನೇ ತರಗತಿಗಾಗಿ ಹೊಸದಾಗಿ ಸೃಜಿಸಲಾದ ಪದವೀಧರ ಪ್ರಾಥಮಿಕ ಶಾಲಾ ಸಹಶಿಕ್ಷಕರ ಹುದ್ದೆಗಳಲ್ಲಿ ಶೇಕಡಾ 80% ರಷ್ಟು ಸ್ಥಳೀಯ ಅಭ್ಯರ್ಥಿಗ'ಳಿಗೆ ಹಾಗೂ ಉಳಿದ ಶೇಕಡಾ 20% ರಷ್ಟು ಹುದ್ದೆಗಳು ಪ್ರಾರಂಭಿಕ ರೋಷ್ಟರ್ ಬಿಂದುವಿನಿಂದ ಮುಕ್ತ ಸ್ಪರ್ಧೆಗಾಗಿ ನಿಯಮಾನುಸಾರ ವರ್ಗೀಕರಿಸಲಾಗಿದೆ.

ಹೆಚ್ಚಿನ ವಿವರಗಳಿಗೆ ಆನ್‌ಲೈನ್‌ನಲ್ಲಿ ನೀಡಿರುವ ಸೂಚನೆಗಳನ್ನು ಗಮನಿಸಬೇಕು. ಹಾಗೂ ಯಾವುದೇ ಹೆಚ್ಚಿನ ಸ್ಪಷ್ಟೀಕರಣಕ್ಕೆ ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಇವರ ಕಛೇರಿಯನ್ನು ಸಂಪರ್ಕಿಸಬಹುದು.

ಸಹಿ:–

*ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಉಪನಿರ್ದೇಶಕರು,*

ಸಾರ್ವಜನಿಕ ಶಿಕ್ಷಣ ಇಲಾಖೆ,ಯಾದಗಿರಿ ಜಿಲ್ಲೆ. ಯಾದಗಿರಿ.

ಉಪನಿರ್ದೇಶಕರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ ಯಾದಗಿರಿ, ಜಿಲ್ಲೆ ಯಾದಗಿರಿ

2014-15 ನೇ ಸಾಲಿನ 1-5ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಮ್ಯಾಟ್ರಿಕ್ಸ್

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಸ್ಥಳೀಯ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 80% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣ ವಿಷಯ-ಸಾಮಾನ್ಯ ಕನ್ನಡ

| | | | | | | | | | | | | |
|---|---|---|---|---|---|---|---|---|---|---|---|---|
| ಬಿಟ್ಟು ಹೋದ ರೋಸ್ಟರ್ ಬಿಂದುಗಳ ಕ್ರಮ ಸಂಖ್ಯೆ | | | | | | | | | | | 230,232,234,236,238,240,242,244,246,248,252,256, 258,262,264,266,268, 270,276,278,280, 282,284, 286,288,296,298, 306,310,312,3 14,316,322,324,326, 328,330,332, 334,336,340,342,344,346,348, 350,352,354,356,360,362,364, 366,368,370,372, 374,378,384, 386,388,392,394,396,400, 406, 410,412,414, 418,420, 422,428,430,432,434 | |
| ತಾಲ್ಲೂಕು | ಸೃಜಿತ ಹುದ್ದೆಗಳು | ಒಟ್ಟು ಹುದ್ದೆಗಳು | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಯಾದಗಿರಿ | 76 | 76 | ಇತರೆ | | | | | | | | 37 | 37 |
| | | | ಗ್ರಾಮೀಣ ಅ | | | | | | | | 21 | 21 |
| | | | ಅಂಗವಿಕಲ | | | | | | | | *4 | *4 |
| | | | ಮಾಜಿ ಸೈನಿಕ | | | | | | | | 6 | 6 |
| | | | ಕ.ಮಾ.ಅಭ್ಯರ್ಥಿ | | | | | | | | 4 | 4 |
| | | | ಯೋ.ನಿರಾ.ಅ | | | | | | | | 4 | 4 |
| ಒಟ್ಟು | | | | | | | | | | | **76** | **76** |

248 ಸಾಮಾನ್ಯ ಅಂಗವಿಕಲ ದೃಷ್ಟಿಮಾಂದ್ಯ, 288 ಸಾಮಾನ್ಯ ಅಂಗವಿಕಲ ಶ್ರವಣ ದೋಷ, 348ಸಾಮಾನ್ಯ ಅಂಗವಿಕಲ ಚಲನವಲನ ವೈಪಲ್ಯ, 388 ಸಾಮಾನ್ಯ ಅಂಗವಿಕಲ ಕುಷ್ಟ ರೋಗ ಗುಣಮುಖ

2014-15 ನೇ ಸಾಲಿನ 1-5ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಮ್ಯಾಟ್ರಿಕ್ಸ್

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಸ್ಥಳೀಯ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 80% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣ ವಿಷಯ-ಸಾಮಾನ್ಯ ಕನ್ನಡ

| | | | | | | | | | | | | |
|---|---|---|---|---|---|---|---|---|---|---|---|---|
| ಬಿಟ್ಟುಹೋದ ರೋಸ್ಟರ ಬಿಂದುಗಳ ಕ್ರಮಸಂಖ್ಯೆ | | | | | 239,271 | | | | | | 80,82,84,86,88,92,94,96,98,100,102,104,106, 110,112,114, 116,118,120, 122,124, 128,130,132,134,136,140,142, 144,146,148,1 50,152,154, 156, 158, 160,162,164, 168, 170,172, 174,176,178, 180, 182, 184, 186, 188, 190,192, 194,196,198,200,202,204,206, 208,210,216,218 ,220,222,224, 228,230,234,236,240, 242,244, 246,250,256, 258, 260, 262,264, 266, 268, 270,272,278, 282,284,286 | |
| ತಾಲೂಕ | ಖಾಲಿ ಹುದ್ದೆಗಳು | ಒಟ್ಟು ಹುದ್ದೆಗಳು | ವರ್ಗೀಕರಣ | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಸುರಪುರ | 90 | 90 | ಇತರೆ | | 1 | | | | | | 47 | 48 |
| | | | ಗ್ರಾಮೀಣ ಅ | | 1 | | | | | | 19 | 20 |
| | | | ಅಂಗವಿಕಲ | | | | | | | | *4 | *4 |
| | | | ಮಾಜಿ ಸೈನಿಕ | | | | | | | | 10 | 10 |
| | | | ಕ.ಮಾ.ಅಭ್ಯರ್ಥಿ | | | | | | | | 4 | 4 |
| | | | ಯೋ.ನಿರಾ.ಅ | | | | | | | | 4 | 4 |
| ಒಟ್ಟು | | | | | **2** | | | | | | **88** | **90** |

88 ಸಾಮಾನ್ಯ ಅಂಗವಿಕಲ ಶ್ರವಣ ದೋಷ, 128ಸಾಮಾನ್ಯ ಅಂಗವಿಕಲ ಚಲನವಲನ ವೈಫಲ್ಯ, 168 ಸಾಮಾನ್ಯ ಅಂಗವಿಕಲ ಕುಷ್ಟ ರೋಗ ಗುಣಮುಖ,208 ಸಾಮಾನ್ಯ ಅಂಗವಿಕಲ ದೃಷ್ಟಿಮಾಂದ್ಯ,

2014-15 ನೇ ಸಾಲಿನ 1-5ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಮ್ಯಾಟ್ರಿಕ್ಸ್

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಸ್ಥಳಿಯ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ ೮೦% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣ ವಿಷಯ-ಸಾಮಾನ್ಯ ಕನ್ನಡ

| | | | | | | | | | | | | |
|---|---|---|---|---|---|---|---|---|---|---|---|---|
| ಬಿಟ್ಟುಹೋದ ರೋಸ್ಟರ ಬಿಂದುಗಳ ಕ್ರಮಸಂಖ್ಯೆ | | | | | | | | | | | 272, 274, 276, 278, 280, 282, 284, 286, 288, 290, 292, 294, 296, 298, 300, 302, 304, 308, 310, 312, 314, 318, 320, 322, 326, 328, 330, 334, 336, 342, 344, 346, 350, 352, 354, 356, 358, 360, 364, 366, 368, 372, 380, 386, 388, 390, 392, 394, 396, 398, 400, 402, 404, 406, 408, 410, 418, 420, 422, 426, 428, 430, 444, 446, 448, 450, 454, 456 | |
| ತಾಲೂಕ | ಪ್ರಕಟಿತ ಹುದ್ದೆಗಳು | ಒಟ್ಟು ಹುದ್ದೆಗಳು | ವರ್ಗೀಕರಣ | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಶಹಾಪೂರ | 68 | 68 | ಇತರೆ | | | | | | | | 33 | 33 |
| | | | ಗ್ರಾಮೀಣ ಅ | | | | | | | | 16 | 16 |
| | | | ಅಂಗವಿಕಲ | | | | | | | | *5 | *5 |
| | | | ಮಾಜಿ ಸೈನಿಕ | | | | | | | | 7 | 7 |
| | | | ಕ.ಮಾ.ಅಭ್ಯರ್ಥಿ | | | | | | | | 3 | 3 |
| | | | ಯೋ.ನಿರಾ.ಅ | | | | | | | | 4 | 4 |
| ಒಟ್ಟು | | | | **0** | **0** | **0** | **0** | **0** | **0** | **0** | **68** | **68** |

288 ಸಾಮಾನ್ಯ ಅಂಗವಿಕಲ ಶ್ರವಣ ದೋಷ, 328 ಸಾಮಾನ್ಯ ಅಂಗವಿಕಲ ಚಲನವಲನ ವೈಫಲ್ಯ, 368 ಸಾಮಾನ್ಯ ಅಂಗವಿಕಲ ಕುಷ್ಟ ರೋಗ ಗುಣಮುಖ,408 ಸಾಮಾನ್ಯ ಅಂಗವಿಕಲ ದೃಷ್ಟಿಮಾಂದ್ಯ,448 ಸಾಮಾನ್ಯ ಅಂಗವಿಕಲ ದೃಷ್ಟಿಮಾಂದ್ಯ,

2014-15 ನೇ ಸಾಲಿನ 1-5ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಮ್ಯಾಟ್ರಿಕ್ಸ್

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಸ್ಥಳಿಯ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ ೮೦% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣ ವಿಷಯ-ಸಾಮಾನ್ಯ ಉರ್ದು

| ಬಿಟ್ಟುಹೂದ ರೊಸ್ಟರ ಬಿಂದುಗಳ ಕ್ರಮಸಂಖ್ಯೆ | | | | 1,9,15 | 3 | 5 | 13,21 | 0 | 17 | 0 | 0 | 0 |
|---|---|---|---|---|---|---|---|---|---|---|---|---|
| ತಾಲೂಕು | ಮಂಜೂರು ಹುದ್ದೆಗಳು | ಖಾಲಿ ಹುದ್ದೆಗಳು | ವರ್ಗೀಕರಣ | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಯಾದಗಿರಿ | ೮ | ೮ | ಇತರೆ | 2 | 1 | 1 | 2 | 0 | 1 | 0 | | 7 |
| | | | ಗ್ರಾಮೀಣ ಅ | 1 | | | | | | | | 1 |
| | | | ಅಂಗವಿಕಲ | | | | | | | | | 0 |
| | | | ಮಾಜಿ ಸೈನಿಕ | | | | | | | | | 0 |
| | | | ಕ.ಮಾ.ಅಭ್ಯರ್ಥಿ | | | | | | | | | 0 |
| | | | ಯೋ.ನಿರಾ.ಅ | | | | | | | | | 0 |
| ಒಟ್ಟು | | | | 3 | 1 | 1 | 2 | 0 | 1 | 0 | 0 | 8 |

ಉಪನಿರ್ದೇಶಕರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ ಯಾದಗಿರಿ, ಜಿಲ್ಲೆ ಯಾದಗಿರಿ

2014-15 ನೇ ಸಾಲಿನ 1-5 ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಮ್ಯಾಟ್ರಿಕ್ಸ್

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಉಳಿಕೆ ಮೂಲ ವೃಂದ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 20% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣವಿಷಯ-ಸಾಮಾನ್ಯ ಉರ್ದು

| ಬಿಟ್ಟುಹೂದ ರೊಸ್ಟರ ಬಿಂದುಗಳ ಕ್ರಮಸಂಖ್ಯೆ | | | | 1,3,15 | 3 | | | | 17 | 0 | 16 | 0 |
|---|---|---|---|---|---|---|---|---|---|---|---|---|
| ತಾಲ್ಲೂಕು | ಮಂಜೂರಾದ ಹುದ್ದೆಗಳು | ಖಾಲಿ ಹುದ್ದೆಗಳು | ವರ್ಗೀಕರಣ | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಯಾದಗಿರಿ | ೬ | ೬ | ಇತರೆ | 2 | 1 | | | | 1 | | 1 | **5** |
| | | | ಗ್ರಾಮೀಣ ಅ | 1 | | | | | | | | **1** |
| | | | ಅಂಗವಿಕಲ | | | | | | | | | |
| | | | ಮಾಜಿ ಸೈನಿಕ | | | | | | | | | |
| | | | ಕ.ಮಾ.ಅಭ್ಯರ್ಥಿ | | | | | | | | | |
| | | | ಯೋ.ನಿರಾ.ಅ | | | | | | | | | |
| ಒಟ್ಟು | | | | **3** | **1** | | | | **1** | **0** | **1** | **6** |

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಸ್ಥಳಿಯ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ ೮೦% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣ ವಿಷಯ-ಸಾಮಾನ್ಯ ಉರ್ದು

| ಬಿಟ್ಟುಹೂದ ರೊಸ್ಟರ ಬಿಂದುಗಳ ಕ್ರಮಸಂಖ್ಯೆ | | | | 1,9 | 3 | 0 | 7 | 0 | 0 | 0 | 4,6,8,10, 12,14 | |
|---|---|---|---|---|---|---|---|---|---|---|---|---|
| ತಾಲೂಕು | ಸೃಜಿತ ಹುದ್ದೆಗಳು | ಖಾಲಿ ಹುದ್ದೆಗಳು | ವರ್ಗೀಕರಣ | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಸುರಪುರ | 10 | 10 | ಇತರೆ | 2 | 1 | | 1 | | | | 3 | 7 |
| | | | ಗ್ರಾಮೀಣ ಅ | | | | | | | | 2 | 2 |
| | | | ಅಂಗವಿಕಲ | | | | | | | | 1 | 1 |
| | | | ಮಾಜಿ ಸೈನಿಕ | | | | | | | | | |
| | | | ಕ.ಮಾ.ಅಭ್ಯರ್ಥಿ | | | | | | | | | |
| | | | ಯೋ.ನಿರಾ.ಅ | | | | | | | | | |
| ಒಟ್ಟು | | | | **2** | **1** | **0** | **1** | **0** | **0** | **0** | **6** | 10 |

ಸಾಮಾನ್ಯ ಅಂಗವಿಕಲ-ದೃಷ್ಟಿಮಾಂದ್ಯ

| ಬಿಟ್ಟುಹೂದ ರೊಸ್ಟರ ಬಿಂದುಗಳ ಕ್ರಮಸಂಖ್ಯೆ | | | | 1, 9, 15, 23, 27, 33 | 3, 39 | 5, 31 | 0 | 0 | 17 | 19 | 0 | |
|---|---|---|---|---|---|---|---|---|---|---|---|---|
| ತಾಲೂಕು | ಸೃಜಿತ ಹುದ್ದೆಗಳು | ಖಾಲಿ ಹುದ್ದೆಗಳು | ವರ್ಗೀಕರಣ | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಶಹಾಪುರ | 12 | 12 | ಇತರೆ | 3 | 2 | 2 | 0 | 0 | 1 | 1 | | 9 |
| | | | ಗ್ರಾಮೀಣ ಅ | 2 | | | | | | | | 2 |
| | | | ಅಂಗವಿಕಲ | 1 | | | | | | | | 1 |
| | | | ಮಾಜಿ ಸೈನಿಕ | | | | | | | | | |
| | | | ಕ.ಮಾ.ಅಭ್ಯರ್ಥಿ | | | | | | | | | |
| | | | ಯೋ.ನಿರಾ.ಅ | | | | | | | | | |
| ಒಟ್ಟು | | | | **6** | **2** | **2** | **0** | **0** | **1** | **1** | | **12** |

2014-15 ನೇ ಸಾಲಿನ 6-8 ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಮ್ಯಾಟ್ರಿಕ್ಸ್

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಸ್ಥಳೀಯ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 80% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣ ವಿಷಯ-ಸಾಮಾನ್ಯ ಕನ್ನಡ

| ತಾಲೂಕು | ಹುದ್ದೆಗಳ ಸಂಖ್ಯೆ | ಹುದ್ದೆಗಳ ಒಟ್ಟು | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|---|---|---|
| ಯಾದಗಿರಿ | 40 | 40 | ಇತರೆ | 3 | 2 | 2 | 3 | 2 | 1 | 1 | 10 | **24** |
| | | | ಗ್ರಾಮೀಣ ಅ | 2 | | | 2 | | | | 5 | **9** |
| | | | ಅಂಗವಿಕಲ | 1 | | | 1 | | | | 1 | **3** |
| | | | ಮಾಜಿ ಸೈನಿಕ | | | | | | | | 2 | **2** |
| | | | ಕ.ಮಾ.ಅಭ್ಯರ್ಥಿ | | | | | | | | 1 | **1** |
| | | | ಯೋ.ನಿರಾ.ಅ | | | | | | | | 1 | **1** |
| ಒಟ್ಟು | | | | **6** | **2** | **2** | **6** | **2** | **1** | **1** | **20** | **40** |
| ಪರಿಶಿಷ್ಟ ಜಾತಿ ಅಂಗವಿಕಲ /2 ಎ ಅಂಕವಿಕಲ/ ಸಾಮಾನ್ಯ ಅಂಗವಿಕಲ –ದೃಷ್ಟಿಮಾಂದ್ಯ | | | | | | | | | | | | |

2014-15 ನೇ ಸಾಲಿನ 6-8 ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಮ್ಯಾಟ್ರಿಕ್ಸ್

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಉಳಿಕೆ ಮೂಲ ವೃಂದ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 20% ರಷ್ಟು)ಹುದ್ದೆಗಳ ಮೀಸಲಾತಿ ವರ್ಗೀಕರಣ ವಿಷಯ-ಸಾಮಾನ್ಯ ಕನ್ನಡ

| ತಾಲೂಕು | ಹುದ್ದೆಗಳ ಸಂಖ್ಯೆ | ಹುದ್ದೆಗಳ ಒಟ್ಟು | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|---|---|---|
| ಯಾದಗಿರಿ | 10 | 10 | ಇತರೆ | 2 | 1 | 1 | 1 | | | | 3 | **8** |
| | | | ಗ್ರಾಮೀಣ ಅ | | | | | | | | 1 | **1** |
| | | | ಅಂಗವಿಕಲ | | | | | | | | 1 | **1** |
| | | | ಮಾಜಿ ಸೈನಿಕ | | | | | | | | | |
| | | | ಕ.ಮಾ.ಅಭ್ಯರ್ಥಿ | | | | | | | | | |
| | | | ಯೋ.ನಿರಾ.ಅ | | | | | | | | | |
| ಒಟ್ಟು | | | | **2** | **1** | **1** | **1** | **0** | **0** | **0** | **5** | **10** |
| ಸಾಮಾನ್ಯ ಅಂಗವಿಕಲ–ದೃಷ್ಟಿಮಾಂದ್ಯ | | | | | | | | | | | | |

2014-15 ನೇ ಸಾಲಿನ 6-8 ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಮ್ಯಾಟ್ರಿಕ್ಸ್

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಸ್ಥಳಿಯ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 80% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣ ವಿಷಯ-ಸಾಮಾನ್ಯ ಕನ್ನಡ

| ತಾಲೂಕ | ಪ್ರಕಟಿತ ಹುದ್ದೆಗಳು | ಒಟ್ಟು ಹುದ್ದೆಗಳು | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|---|---|---|
| ಸುರಪುರ | 41 | 41 | ಇತರೆ | 4 | 2 | 2 | 3 | 2 | 1 | 1 | 10 | 25 |
| | | | ಗ್ರಾಮೀಣ ಅ | 2 | | | 2 | | | | 5 | 9 |
| | | | ಅಂಗವಿಕಲ | 1 | | | 1 | | | | 1 | 3 |
| | | | ಮಾಜಿ ಸೈನಿಕ | | | | | | | | 2 | 2 |
| | | | ಕ.ಮಾ.ಅಭ್ಯರ್ಥಿ | | | | | | | | 1 | 1 |
| | | | ಯೋ.ನಿರಾ.ಅ | | | | | | | | 1 | 1 |
| ಒಟ್ಟು | | | | **7** | **2** | **2** | **6** | **2** | **1** | **1** | **20** | **41** |
| ಪರಿಶಿಷ್ಟ ಜಾತಿ ಅಂಗವಿಕಲ /2 ಎ ಅಂಕವಿಕಲ/ ಸಾಮಾನ್ಯ ಅಂಗವಿಕಲ –ದೃಷ್ಟಿಮಾಂದ್ಯ | | | | | | | | | | | | |

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಉಳಿಕೆ ಮೂಲ ವೃಂದ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 20% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣ ವಿಷಯ-ಸಾಮಾನ್ಯ ಕನ್ನಡ

| ತಾಲೂಕ | ಪ್ರಕಟಿತ ಹುದ್ದೆಗಳು | ಒಟ್ಟು ಹುದ್ದೆಗಳು | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|---|---|---|
| ಸುರಪುರ | 10 | 10 | ಇತರೆ | 2 | 1 | 1 | 1 | | | | 3 | 8 |
| | | | ಗ್ರಾಮೀಣ ಅ | | | | | | | | 1 | 1 |
| | | | ಅಂಗವಿಕಲ | | | | | | | | 1 | 1 |
| | | | ಮಾಜಿ ಸೈನಿಕ | | | | | | | | | |
| | | | ಕ.ಮಾ.ಅಭ್ಯರ್ಥಿ | | | | | | | | | |
| | | | ಯೋ.ನಿರಾ.ಅ | | | | | | | | | |
| ಒಟ್ಟು | | | | **2** | **1** | **1** | **1** | **0** | **0** | **0** | **5** | **10** |
| ಸಾಮಾನ್ಯ ಅಂಗವಿಕಲ–ದೃಷ್ಟಿಮಾಂದ್ಯ | | | | | | | | | | | | |

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಸ್ಥಳಿಯ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 80% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣ ವಿಷಯ-ಸಾಮಾನ್ಯ ಕನ್ನಡ

| ತಾಲೂಕ | ಪ್ರಕಟಿತ ಹುದ್ದೆಗಳು | ಒಟ್ಟು ಹುದ್ದೆಗಳು | | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|---|---|---|
| ಶಹಾಪೂರ | 40 | 40 | ಇತರೆ | 3 | 2 | 2 | 3 | 2 | 1 | 1 | 10 | 24 |
| | | | ಗ್ರಾಮೀಣ ಅ | 2 | | | 2 | | | | 5 | 9 |
| | | | ಅಂಗವಿಕಲ | 1 | | | 1 | | | | 1 | 3 |
| | | | ಮಾಜಿ ಸೈನಿಕ | | | | | | | | 2 | 2 |
| | | | ಕ.ಮಾ.ಅಭ್ಯರ್ಥಿ | | | | | | | | 1 | 1 |
| | | | ಯೋ.ನಿರಾ.ಅ | | | | | | | | 1 | 1 |
| ಒಟ್ಟು | | | | **6** | **2** | **2** | **6** | **2** | **1** | **1** | **20** | 40 |
| ಪರಿಶಿಷ್ಟ ಜಾತಿ ಅಂಗವಿಕಲ /2 ಎ ಅಂಕವಿಕಲ/ ಸಾಮಾನ್ಯ ಅಂಗವಿಕಲ –ದೃಷ್ಟಿಮಾಂದ್ಯ | | | | | | | | | | | | |

2014-15 ನೇ ಸಾಲಿನ 6-8 ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಮ್ಯಾಟ್ರಿಕ್ಸ್

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಉಳಿಕೆ ಮೂಲ ವೃಂದ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 20% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣ ವಿಷಯ-ಸಾಮಾನ್ಯ ಕನ್ನಡ

| ತಾಲೂಕ | ಪ್ರಕಟಿತ ಹುದ್ದೆಗಳು | ಒಟ್ಟು ಹುದ್ದೆಗಳು | | ಪ.ಜಾತಿ | ಪ.ಪಂಗಡ | ಪ್ರವರ್ಗ-1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|---|---|---|
| ಶಹಾಪೂರ | 10 | 10 | ಇತರೆ | 2 | 1 | 1 | 1 | | | | 3 | 8 |
| | | | ಗ್ರಾಮೀಣ ಅ | | | | | | | | 1 | 1 |
| | | | ಅಂಗವಿಕಲ | | | | | | | | 1 | 1 |
| | | | ಮಾಜಿ ಸೈನಿಕ | | | | | | | | | |
| | | | ಕ.ಮಾ.ಅಭ್ಯರ್ಥಿ | | | | | | | | | |
| | | | ಯೋ.ನಿರಾ.ಅ | | | | | | | | | |
| ಒಟ್ಟು | | | | **2** | **1** | **1** | **1** | | | | **5** | **10** |
| ಸಾಮಾನ್ಯ ಅಂಗವಿಕಲ–ದೃಷ್ಟಿಮಾಂದ್ಯ | | | | | | | | | | | | |

2014-15 ನೇ ಸಾಲಿನ 6-8 ನೇ ತರಗತಿಗಳ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ ಮ್ಯಾಟ್ರಿಕ್ಸ್

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಸ್ಥಳಿಯ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 80% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣವಿಷಯ- ಕನ್ನಡ ಆಂಗ್ಲ

| ತಾಲೂಕ | ಪ್ರಕಟಿತ ಹುದ್ದೆಗಳು | ಒಟ್ಟು ಹುದ್ದೆಗಳು | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|---|---|---|
| ಯಾದಗಿರಿ | 41 | 41 | ಇತರೆ | 4 | 2 | 2 | 3 | 2 | 1 | 1 | 10 | **25** |
| | | | ಗ್ರಾಮೀಣ ಅ | 2 | | | 2 | | | | 5 | **9** |
| | | | ಅಂಗವಿಕಲ | 1 | | | 1 | | | | 1 | **3** |
| | | | ಮಾಜಿ ಸೈನಿಕ | | | | | | | | 2 | **2** |
| | | | ಕ.ಮಾ.ಅಭ್ಯರ್ಥಿ | | | | | | | | 1 | **1** |
| | | | ಯೋ.ನಿರಾ.ಅ | | | | | | | | 1 | **1** |
| ಒಟ್ಟು | | | | **7** | **2** | **2** | **6** | **2** | **1** | **1** | **20** | **41** |
| ಪರಿಶಿಷ್ಟ ಜಾತಿ ಅಂಗವಿಕಲ /2 ಎ ಅಂಕವಿಕಲ/ ಸಾಮಾನ್ಯ ಅಂಗವಿಕಲ –ದೃಷ್ಟಿಮಾಂದ್ಯ | | | | | | | | | | | | |

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಉಳಿಕೆ ಮೂಲ ವೃಂದ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 20% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣವಿಷಯ- ಕನ್ನಡ ಆಂಗ್ಲ

| ತಾಲೂಕ | ಪ್ರಕಟಿತ ಹುದ್ದೆಗಳು | ಒಟ್ಟು ಹುದ್ದೆಗಳು | | ಪ.ಜಾತಿ | ಪಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|---|---|---|
| ಯಾದಗಿರಿ | 10 | 10 | ಇತರೆ | 2 | 1 | 1 | 1 | | | | 3 | **8** |
| | | | ಗ್ರಾಮೀಣ ಅ | | | | | | | | 1 | **1** |
| | | | ಅಂಗವಿಕಲ | | | | | | | | 1 | **1** |
| | | | ಮಾಜಿ ಸೈನಿಕ | | | | | | | | | |
| | | | ಕ.ಮಾ.ಅಭ್ಯರ್ಥಿ | | | | | | | | | |
| | | | ಯೋ.ನಿರಾ.ಅ | | | | | | | | | |
| ಒಟ್ಟು | | | | **2** | **1** | **1** | **1** | **0** | **0** | **0** | **5** | **10** |
| ಸಾಮಾನ್ಯ ಅಂಗವಿಕಲ–ದೃಷ್ಟಿಮಾಂದ್ಯ | | | | | | | | | | | | |

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಸ್ಥಳಿಯ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ ೮೦% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣವಿಷಯ- ಕನ್ನಡ ಆಂಗ್ಲ

| ತಾಲೂಕ | ಪ್ರಕಟಿತ ಹುದ್ದೆಗಳು | ಒಟ್ಟು ಹುದ್ದೆಗಳು | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|---|---|---|
| ಸುರಪುರ | 40 | 40 | ಇತರೆ | 3 | 2 | 2 | 3 | 2 | 1 | 1 | 10 | 24 |
| | | | ಗ್ರಾಮೀಣ ಅ | 2 | | | 2 | | | | 5 | 9 |
| | | | ಅಂಗವಿಕಲ | 1 | | | 1 | | | | 1 | 3 |
| | | | ಮಾಜಿ ಸೈನಿಕ | | | | | | | | 2 | 2 |
| | | | ಕ.ಮಾ.ಅಭ್ಯರ್ಥಿ | | | | | | | | 1 | 1 |
| | | | ಯೋ.ನಿರಾ.ಅ | | | | | | | | 1 | 1 |
| ಒಟ್ಟು | | | | **6** | **2** | **2** | **6** | **2** | **1** | **1** | **20** | **40** |
| ಪರಿಶಿಷ್ಟ ಜಾತಿ ಅಂಗವಿಕಲ /2 ಎ ಅಂಕವಿಕಲ/ ಸಾಮಾನ್ಯ ಅಂಗವಿಕಲ –ದೃಷ್ಟಿಮಾಂದ್ಯ | | | | | | | | | | | | |

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಉಳಿಕೆ ಮೂಲ ವೃಂದ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 20% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣವಿಷಯ- ಕನ್ನಡ ಆಂಗ್ಲ

| ತಾಲೂಕ | ಪ್ರಕಟಿತ ಹುದ್ದೆಗಳು | ಒಟ್ಟು ಹುದ್ದೆಗಳು | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|---|---|---|
| ಸುರಪುರ | 10 | 10 | ಇತರೆ | 2 | 1 | 1 | 1 | | | | 3 | **8** |
| | | | ಗ್ರಾಮೀಣ ಅ | | | | | | | | 1 | **1** |
| | | | ಅಂಗವಿಕಲ | | | | | | | | 1 | **1** |
| | | | ಮಾಜಿ ಸೈನಿಕ | | | | | | | | | |
| | | | ಕ.ಮಾ.ಅಭ್ಯರ್ಥಿ | | | | | | | | | |
| | | | ಯೋ.ನಿರಾ.ಅ | | | | | | | | 0 | **0** |
| ಒಟ್ಟು | | | | **2** | **1** | **1** | **1** | | | | **5** | **10** |
| ಸಾಮಾನ್ಯ ಅಂಗವಿಕಲ–ದೃಷ್ಟಿಮಾಂದ್ಯ | | | | | | | | | | | | |

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಸ್ಥಳಿಯ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 80% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣವಿಷಯ- ಕನ್ನಡ ಆಂಗ್ಲ

| ತಾಲೂಕ | ಪ್ರಕಟಿತ ಹುದ್ದೆಗಳು | ಒಟ್ಟು ಹುದ್ದೆಗಳು | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|---|---|---|
| ಶಹಾಪೂರ | 41 | 41 | ಇತರೆ | 4 | 2 | 2 | 3 | 2 | 1 | 1 | 10 | **25** |
| | | | ಗ್ರಾಮೀಣ ಅ | 2 | | | 2 | | | | 5 | **9** |
| | | | ಅಂಗವಿಕಲ | 1 | | | 1 | | | | 1 | **3** |
| | | | ಮಾಜಿ ಸೈನಿಕ | | | | | | | | 2 | **2** |
| | | | ಕ.ಮಾ.ಅಭ್ಯರ್ಥಿ | | | | | | | | 1 | **1** |
| | | | ಯೋ.ನಿರಾ.ಅ | | | | | | | | 1 | **1** |
| ಒಟ್ಟು | | | | **7** | **2** | **2** | **6** | **2** | **1** | **1** | **20** | **41** |
| ಪರಿಶಿಷ್ಟ ಜಾತಿ ಅಂಗವಿಕಲ /2 ಎ ಅಂಕವಿಕಲ/ ಸಾಮಾನ್ಯ ಅಂಗವಿಕಲ –ದೃಷ್ಟಿಮಾಂದ್ಯ | | | | | | | | | | | | |

ಹೈದ್ರಾಬಾದ -ಕರ್ನಾಟಕ ಪ್ರದೇಶದ (ಉಳಿಕೆ ಮೂಲ ವೃಂದ) ಅಭ್ಯರ್ಥಿಗಳಿಗೆ ಮೀಸಲಿರಿಸಿದ (ಶೇ 20% ರಷ್ಟು) ಹುದ್ದೆಗಳ ಮೀಸಲಾತಿ ವರ್ಗೀಕರಣವಿಷಯ- ಕನ್ನಡ ಆಂಗ್ಲ

| ವಿಷಯ- ಕನ್ನಡ ಆಂಗ್ಲ | | | | | | | | | | | | |
|---|---|---|---|---|---|---|---|---|---|---|---|---|
| ತಾಲೂಕ | ಪ್ರಕಟಿತ ಹುದ್ದೆಗಳು | ಒಟ್ಟು ಹುದ್ದೆಗಳು | | ಪ.ಜಾತಿ | ಪ.ಪಂಗಡ | ಪ್ರವರ್ಗ–1 | 2 ಎ | 2 ಬಿ | 3ಎ | 3ಬಿ | ಸಾಮಾನ್ಯ | ಒಟ್ಟು |
| ಶಹಾಪೂರ | 10 | 10 | ಇತರೆ | 2 | 1 | 1 | 1 | | | | 3 | **8** |
| | | | ಗ್ರಾಮೀಣ ಅ | | | | | | | | 1 | **1** |
| | | | ಅಂಗವಿಕಲ | | | | | | | | 1 | **1** |
| | | | ಮಾಜಿ ಸೈನಿಕ | | | | | | | | | |
| | | | ಕ.ಮಾ.ಅಭ್ಯರ್ಥಿ | | | | | | | | | |
| | | | ಯೋ.ನಿರಾ.ಅ | | | | | | | | | |
| ಒಟ್ಟು | | | | **2** | **1** | **1** | **1** | | | | **5** | **10** |
| ಸಾಮಾನ್ಯ ಅಂಗವಿಕಲ–ದೃಷ್ಟಿಮಾಂದ್ಯ | | | | | | | | | | | | |

ಆಯ್ಕೆ ಪಾಧಿಕಾರಿಗಳ ಹಾಗೂ ಉಪನಿರ್ದೇಶಕರು (ಆಡಳಿತ)

ಸಾರ್ವಜನಿಕ ಶಿಕ್ಷಣ ಇಲಾಖೆ ಯಾದಗಿರಿ.

PR-65
SC-50

## ಸಾರ್ವಜನಿಕ ಶಿಕ್ಷಣ ಇಲಾಖೆ,

### ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾ ಉಪನಿರ್ದೇಶಕರು [ಆಡಳಿತ], ಸಾರ್ವಜನಿಕ ಶಿಕ್ಷಣ ಇಲಾಖೆ, ಉಡುಪಿ ಜಿಲ್ಲೆ ಉಡುಪಿ

## : ನೇಮಕಾತಿ ಅಧಿಸೂಚನೆ :

**ಸಂಖ್ಯೆ:ಎ2:ಪ್ರಾ.ಶಾ.ಶಿ:ನೇಮಕ: 01 /2014-15 , ದಿನಾಂಕ:23ನೇ ಮಾರ್ಚ 2015**

***ವಿಷಯ***: 2014-15ನೇ ಸಾಲಿನಲ್ಲಿ 1-5, ಹಾಗೂ 6-8ನೇ ತರಗತಿ ಸರ್ಕಾರಿ ಪ್ರಾಥಮಿಕ ಶಾಲಾ ಸಹಶಿಕ್ಷಕರ ಮತ್ತು ಸಹಶಿಕ್ಷಕಿ ವೃಂದದ ಹುದ್ದೆಗಳನ್ನು ನೇರ ನೇಮಕಾತಿಯಿಂದ ಜಿಲ್ಲಾ ಮಟ್ಟದ [ಸಂಯುಕ್ತ ಸ್ಪರ್ಧಾತ್ಮಕ] ಪರೀಕ್ಷೆಯ ಮೂಲಕ ಭರ್ತಿ ಮಾಡುವ ಬಗ್ಗೆ.

***ಉಲ್ಲೇಖ***: 1.ಸರ್ಕಾರದ ಅಧಿಕೃತ ಪ್ರಕಟಣೆ ಸಂ:ಇಡಿ:ಡಿಪಿಎಆರ್:41:ಎಸ್‌ಆರ್‌ಇ:2001, ದಿನಾಂಕ:09.08.2001.

2] ಸರ್ಕಾರಿ ಆದೇಶ ಸಂ:ಸಿಆಸುಇ:08:ಸಹಿಮ:1995, ದಿನಾಂಕ:20.06.1995.

3] ಸರ್ಕಾರಿ ಆದೇಶ ಸಂ:ಸಿಆಸುಇ:97:ಸನೆನಿ:2002, ದಿನಾಂಕ:22.11.2002.

4] ಸರ್ಕಾರಿ ಆದೇಶ ಸಂ:ಸಿಆಸುಇ:53:ಸೇನೇನಿ:2007, ದಿನಾಂಕ:04.01.2008.

5] ಸರ್ಕಾರಿ ಆದೇಶ ಸಂ:ಇಡಿ:21:ಯೋಯೋಕ:2010, ದಿನಾಂಕ:02.11.2012.

6] ಸರ್ಕಾರಿ ಆದೇಶ ಸಂ:ಇಡಿ:238:ಪಿಬಿಐ:2012, ದಿನಾಂಕ:21.01.2013.

7] ಸರ್ಕಾರಿ ಆದೇಶ ಸಂ:ಸಿಆಸುಇ:50:ಎಸ್.ಆರ್.ಆರ್.:2007, ದಿನಾಂಕ:26.07.2011

8] ಸರ್ಕಾರಿ ಆದೇಶ ಸಂ :ಸಿಆಸುಇ:54:ಎಸ್.ಆರ್.ಆರ್.:2012,ದಿನಾಂಕ:07.08.2012

9] ಸರ್ಕಾರಿ ಆದೇಶ ಸಂ :ಸಿಆಸುಇ: 43: ಹೆಚ್‌ಕೆಸಿ 2013,ದಿನಾಂಕ:29.01.2014

10] ಸರ್ಕಾರಿ ಆದೇಶ ಸಂ : ಸಿಆಸುಇ 33 ಹೈಕಉ 2014,ದಿನಾಂಕ: 10.04.2014

11] ಸರ್ಕಾರಿ ಆದೇಶ ಸಂ:ಇಡಿ:626:ಪಿಬಿಎಸ್:2014, ದಿನಾಂಕ:31.01.2015

ಸಾರ್ವಜನಿಕ ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಪರೀಕ್ಷೆ ಮೂಲಕ ಅಂದರೆ ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ [ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಪಕ್ಷನ್] [ರೆಕ್ರೂಟ್‌ಮೆಂಟ್][ಅಮೆಂಡ್‌ಮೆಂಟ್]ರೂಲ್ಸ್-2001[ಸಂಖ್ಯೆ:ಡಿಪಿಎಆರ್:41:ಎಸ್‌ಆರ್‌ಇ:2001,ದಿನಾಂಕ:09.08.2001]ರ <u>ಹಾಗೂ ಇಡಿ:626:ಪಿಬಿಎಸ್:2014, ದಿನಾಂಕ:31.01.2015</u> ನಿಯಮಗಳನ್ವಯ ಆಯ್ಕೆ ಮಾಡಲು ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ. ನೇಮಕಾತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನ ಅಂದರೆ ದಿನಾಂಕ: 27-04-2015 ರಂದು ಅರ್ಹರಾಗಿರುವ <u>ಹಾಗೂ ಶಿಕ್ಷಕರ ಅರ್ಹತಾ ಪರೀಕ್ಷೆ (ಟಿ.ಇ.ಟಿ)ಯಲ್ಲಿ ಅರ್ಹತೆಗಳಿಸಿ ಅರ್ಹತಾ ಪ್ರಮಾಣ ಪತ್ರವನ್ನು ಪಡೆದಿರುವ</u> ಅಭ್ಯರ್ಥಿಗಳಿಂದ ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ ಆನ್‌ಲೈನ್ ಮೂಲಕ ಅರ್ಜಿಗಳನ್ನು ಕರೆಯಲಾಗಿದೆ. ಇತರೆ <u>ಬೇರೆ</u> ಯಾವುದೇ ನಮೂನೆಯಲ್ಲಿ ಸಲ್ಲಿಸುವ ಅರ್ಜಿಗಳನ್ನು <u>ನೇಮಕಾತಿಗಾಗಿ</u> ಪರಿಗಣಿಸಲಾಗುವುದಿಲ್ಲ.

ಆಯ್ಕೆ ಮಾಡಲು ಉಲ್ಲೇಖದಲ್ಲಿ ನಮೂದಿಸಿರುವ ನೇಮಕಾತಿ ನಿಯಮಗಳು, ಮೀಸಲಾತಿ ನಿಯಮಗಳು ಹಾಗೂ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರದ ಆದೇಶಗಳ ಪ್ರಕಾರ ಇರುವ ಪ್ರಚಲಿತ ನಿಯಮಗಳನ್ನು ಅನುಸರಿಸಿ ಆಯ್ಕೆ ಮಾಡಲು ಪ್ರಕಟಣೆಯನ್ನು ಸಾರ್ವಜನಿಕರ ತಿಳುವಳಿಕೆಗಾಗಿ ನೀಡಲಾಗಿದೆ.

ಟಿಪ್ಪಣಿ: ಈಗ ಅಧಿಸೂಚಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

### *02] ಆಯ್ಕೆಗೆ ಅರ್ಹತೆ:*

ಆಯ್ಕೆಗೆ ಅರ್ಹತೆ ಪಡೆಯಲು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳು ಆಯಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು ಹೊಂದಿರಬೇಕು. <u>ಶಿಕ್ಷಕರ ಅರ್ಹತಾ ಪರೀಕ್ಷೆಯಲ್ಲಿ (ಟಿ.ಇ.ಟಿ) ಅರ್ಹತೆಗಳಿಸಿದ ಅಭ್ಯರ್ಥಿಗಳು ಮಾತ್ರ</u> ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಲ್ಲದೆ, ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಅವರು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ.ಯಲ್ಲಿ ಆ ನೇಮಕಾತಿ ಭಾಷೆಯ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರಬೇಕು ಅಥವಾ ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

### *03] ನಿಗದಿತ ಅರ್ಜಿ ನಮೂನೆ ಸಲ್ಲಿಸುವ ವಿಧಾನ:*

ಅಭ್ಯರ್ಥಿಯು ಆನ್‌ಲೈನ್ [ON LINE] ಮೂಲಕ ಇಲಾಖೆಯ ಅಧಿಕೃತ ವೆಬ್‌ಸೈಟ್ [http://schooleducation.kar.nic.in] ಮುಖಾಂತರ ಅರ್ಜಿ ಸಲ್ಲಿಸಬೇಕು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶ ಇರುವುದಿಲ್ಲ. ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ [After submission of application] ದೊರೆಯುವ ಗಣಕೀಕೃತ ಅರ್ಜಿ ಸಂಖ್ಯೆಯನ್ನು ಪಡೆದುಕೊಳ್ಳುವುದು ಮತ್ತು ಸದರಿ ಸಂಖ್ಯೆಯನ್ನು ಕಡ್ಡಾಯವಾಗಿ ಬರೆದಿಟ್ಟುಕೊಳ್ಳತಕ್ಕದ್ದು. ಈ ಅರ್ಜಿ ಸಂಖ್ಯೆಯು ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ. ಆನ್ ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ ಮತ್ತು ಚಲನ್ ಪ್ರತಿಗಳ ಮುದ್ರಿತ ಪ್ರತಿಗಳನ್ನು ತೆಗೆದುಕೊಳ್ಳತಕ್ಕದ್ದು. ಮುದ್ರಿತ ಚಲನ್ ಪ್ರತಿಯನ್ನು ಆಧರಿಸಿ ಪರೀಕ್ಷಾ ಶುಲ್ಕವನ್ನು ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಯಾವುದಾದರೂ ಶಾಖೆಯಲ್ಲಿ ಪಾವತಿಸಬಹುದು. ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ. ಹಾಗೂ ಸದರಿ ಶುಲ್ಕವನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಈ ಕೆಳಕಂಡಂತೆ ನಿಗದಿಪಡಿಸಿದ ಅರ್ಜಿ ಶುಲ್ಕವನ್ನು ಕೊನೆಯ ದಿನಾಂಕದೊಳಗೆ ಆನ್‌ಲೈನ್ ಮೂಲಕವೇ ಪಾವತಿಸುವುದು. ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶಪತ್ರಗಳನ್ನು ಮೇಲೆ ನಮೂದಿಸಿರುವ ವೆಬ್‌ಸೈಟ್‌ನಲ್ಲಿ ಡೌನ್‌ಲೋಡ್ ಮಾಡಿಕೊಳ್ಳಬೇಕು. ಪ್ರವೇಶ ಪತ್ರಗಳನ್ನು ಡೌನ್‌ಲೋಡ್ ಮಾಡಿಕೊಳ್ಳಲು ನಿಗದಿಪಡಿಸಿದ ಅವಧಿಯನ್ನು ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಅನ್‌ಲೈನ್ ಅರ್ಜಿಯನ್ನು ಸಲ್ಲಿಸುವಾಗ ಅಭ್ಯರ್ಥಿಗೆ ನೀಡಿರುವ ನೊಂದಣಿ ಸಂಖ್ಯೆ ಮತ್ತು ಇತರೆ ಮಾಹಿತಿಯನ್ನು ವೆಬ್‌ಸೈಟ್‌ನಲ್ಲಿ ನಮೂದಿಸಿ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಡೌನ್‌ಲೋಡ್ ಮಾಡಿಕೊಳ್ಳುವುದು. ಕೊನೆಯ ದಿನಾಂಕದ ನಂತರ ಪಾವತಿಸಿದ ಅರ್ಜಿ ಶುಲ್ಕವನ್ನು ಪರಿಗಣಿಸಲಾಗುವುದಿಲ್ಲ ಮತ್ತು ಸ್ವೀಕರಿಸಲಾಗುವುದಿಲ್ಲ. ಅರ್ಜಿಗಳನ್ನು ಆನ್‌ಲೈನ್ ಮೂಲಕ ಭರ್ತಿ ಮಾಡಬೇಕಾಗಿದ್ದು, ಈ ಬಗ್ಗೆ ಮಾರ್ಗಸೂಚಿಯನ್ನು ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗಿದೆ.

### *04] ಅರ್ಜಿ ಸಲ್ಲಿಸಲು ಪಾವತಿಸಬೇಕಾದ ಶುಲ್ಕ:*

| *ಕ್ರಸ* | *ವಿವರ* | *1-5 ಅಥವಾ 6-8 ಒಂದು ಪರೀಕ್ಷೆಗೆ ( ರೂಗಳಲ್ಲಿ)* | *1-5 ಅಥವಾ 6-8 ಎರಡು ಪರೀಕ್ಷೆಗೆ ( ರೂಗಳಲ್ಲಿ)* |
|---|---|---|---|
| *01* | ಪರಿಶಿಷ್ಠ ಜಾತಿ, ಪರಿಶಿಷ್ಠ ವರ್ಗ, ಪ್ರವರ್ಗ-1/ ಅಂಗವಿಕಲ ಅಭ್ಯರ್ಥಿಗಳಿಗೆ ಸೇರಿದ ಅಭ್ಯರ್ಥಿಗಳಿಗೆ | *250* | *400* |
| *02* | ಇತರೆ ಎಲ್ಲಾ ಅಭ್ಯರ್ಥಿಗಳಿಗೆ | *500* | *800* |

### *05] ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:*

ದಿನಾಂಕ:27-04-2015 ಅಥವಾ ಅದಕ್ಕೂ ಮೊದಲು.

### *06] ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ:*

ಎಲ್ಲಾ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗದಿಪಡಿಸಿದೆ.

ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಹುದ್ದೆಗಳಿಗೆ ಟಿ.ಇ.ಟಿ ಪರೀಕ್ಷೆಯನ್ನು ತೇರ್ಗಡೆಯಾಗಿದ್ದಲ್ಲಿ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳ ಅವಶ್ಯಕತೆ ಇರುವುದಿಲ್ಲ. ಆದರೆ, ಹುದ್ದೆಗಳಿಗೆ ತಮ್ಮ ಆಧ್ಯತೆಯನ್ನು ನಮೂದಿಸಬೇಕು. ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿಯರ ವೃಂದದ ವಿಷಯಗಳ ಹಾಗೂ ವಿವಿಧ ಮಾಧ್ಯಮದ ಬ್ಲಾಕ್‌ವಾರು ಹುದ್ದೆಗಳ ಸಂಖ್ಯೆ ಮತ್ತು ಮೀಸಲಾತಿ ವರ್ಗೀಕರಣದ ವಿವರಗಳನ್ನು ಈ ಅಧಿಸೂಚನೆಗೆ ಲಗತ್ತಿಸಿರುವ ***"ವರ್ಗೀಕರಣದ ಅನುಬಂಧದಲ್ಲಿ "*** ಪ್ರತ್ಯೇಕವಾಗಿ ನೀಡಲಾಗಿದೆ.

### *07] ಆಯ್ಕೆಗಾಗಿ 1-5ನೇ ತರಗತಿ ಹಾಗೂ 6-8 ನೇ ತರಗತಿ ಕಿರಿಯ /ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಬೋಧಿಸುವ ಶಿಕ್ಷಕರಿಗೆ ಹುದ್ದೆಗಳು ,ವೇತನ ಶ್ರೇಣಿ: ಅರ್ಹತೆ ಮತ್ತು ಆಯ್ಕೆ ವಿಧಾನವನ್ನು ಈ ಕೆಳಗೆ ನೀಡಲಾಗಿದೆ*

### *08] ಅಭ್ಯರ್ಥಿಗಳ ಅರ್ಹತೆ:*

ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ ವೃಂದದ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ಅರ್ಹತೆಗಳು.

- ***ವಿದ್ಯಾರ್ಹತೆ:***

ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಯು ಉಲ್ಲೇಖ(11)ರ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಗೊಳಿಸಲಾಗಿರುವ ವಿದ್ಯಾರ್ಹತೆ ಹೊಂದಿರಬೇಕು. ಪ್ರತಿ ವಿಷಯ ಹಾಗೂ ಮಾಧ್ಯಮದ ಹುದ್ದೆಗೆ ಸಂಬಂಧಿಸಿದಂತೆ ನಿಗದಿಪಡಿಸಿರುವ ವಿದ್ಯಾರ್ಹತೆ ವಿವರಗಳು ಕೆಳಗಿನಂತೆ ಇರುತ್ತವೆ.

***01.*** ಪ್ರಾಥಮಿಕ ಶಾಲಾ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ], ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

***02.*** ಹುದ್ದೆಗಳ ಸಂಖ್ಯೆ ಹಾಗೂ ವಿಷಯಗಳು ಸಂಬಂಧಿಸಿದ ಅಧಿಸೂಚನೆಯಲ್ಲಿ ನಮೂದಿಸಿರುವ ಮ್ಯಾಟ್ರಿಕ್ಸ್‌ಗೆ ಅನುಗುಣವಾಗಿರುತ್ತದೆ. ಮ್ಯಾಟ್ರಿಕ್ಸ್ ಪ್ರತಿಯನ್ನು ಮಾಹಿತಿ ಪುಸ್ತಕದೊಂದಿಗೆ ಲಗತ್ತಿಸಿದೆ.

***ವೇತನ ಶ್ರೇಣಿ–[13600–26000]:–***

13600–300–14200–350–15600–400–17200–450–19000–500–21000–600–24600–700–26000

***I ಪ್ರಾಥಮಿಕ ಶಾಲಾ 1–5ನೇ ತರಗತಿಗಾಗಿ ಸರ್ಕಾರಿ ಕಿರಿಯ/ಹಿರಿಯ ಪ್ರಾಥಮಿಕ ಶಾಲೆಗೆ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ] ಹುದ್ದೆಗಳಿಗೆ:***

***ಅ.*** ಅಭ್ಯರ್ಥಿಯು ಗೊತ್ತುಪಡಿಸಿದ ಮಂಡಳಿಯು ನಡೆಸುವ ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಸಾಮಾನ್ಯ ಹಾಗೂ ಹಿಂದುಳಿದ ಅಭ್ಯರ್ಥಿಗಳೂ ಕನಿಷ್ಟ ಶೇಕಡ 50%ನ್ನು ಹಾಗೂ. ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ 45% ಅಂಕಗಳೊಂದಿಗೆ ತೇರ್ಗಡೆ ಹೊಂದಿರಬೇಕು. ಮತ್ತು ಎರಡು ವರ್ಷದ ಡಿ.ಇಡಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರತಕ್ಕದ್ದು

ಅಥವಾ

ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ ಶೇಕಡ 45% ನ್ನು **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳನ್ನು ನಾಲ್ಕು ವರ್ಷದ ಬ್ಯಾಚುಲರ್ ಆಫ್ ಎಲಿಮೆಂಟರಿ ಎಜುಕೇಷನ್‌ನ ವಿದ್ಯಾರ್ಹತೆ ಹೊಂದಿರತಕ್ಕದ್ದು

ಅಥವಾ

ಮಂಡಳಿಯು ನಡೆಸುವ ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ 45 % **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳನ್ನು ಪಡೆದಿರತಕ್ಕದ್ದು ಮತ್ತು ಎನ್.ಸಿ.ಟಿ.ಇ ನಿಯಮಗಳ ರೀತ್ಯಾ ಎರಡು ವರ್ಷದ ಡಿಪ್ಲೋಮೋ ಇನ್ ಎಜುಕೇಷನ್ ( ಸ್ಪೆಷಲ್ ಎಡುಕೇಷನ್)ನ್ನು ಹೊಂದಿರತಕ್ಕದ್ದು

ಮತ್ತು

ಸರ್ಕಾರವು ಗೊತ್ತುಪಡಿಸಿದ ಸಕ್ಷಮ ಪ್ರಾಧಿಕಾರಿಯು ನಡೆಸುವ ಶಿಕ್ಷಕರ ಅರ್ಹತಾ ಪರೀಕ್ಷೆ ಪೇಪರ್–01 ರಲ್ಲಿ ತೇರ್ಗಡೆಹೊಂದಿರತಕ್ಕದ್ದು

ಹಾಗೂ

ಸರ್ಕಾರಿ ಕಿರಿಯ ಹಾಗೂ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 1–5ನೇ ತರಗತಿ ಬೋದಿಸಲು ಅರ್ಜಿಸಲ್ಲಿಸುವ ಅಭ್ಯರ್ಥಿಯು ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಸಾಮಾನ್ಯ ( ಕನ್ನಡ, ಉರ್ದು.ತೆಮಿಳ್, ತೆಲುಗು, ಬಂಗಾಲಿ ಅಥವಾ ಮರಾಠಿ) ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ / ಡಿ.ಇಡಿ./ ತತ್ಸಮಾನ ಪರೀಕ್ಷೆಯಲ್ಲಿ ಅಭ್ಯಾಸ ಮಾಡಿರಬೇಕು. ಅಥವಾ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಅಬ್ಯಾಸ ಮಾಡಿರಬೇಕು.

ಅಥವಾ

***ಕನ್ನಡ ಮಾಧ್ಯಮದ ಶಾಲೆಗಳ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***II 6-8 ನೇ ತರಗತಿಯಲ್ಲಿನ ಉನ್ನತೀಕರಿಸಿದ ಪ್ರಾಥಮಿಕ ಶಾಲೆಗಳಿಗೆ ಪದವೀಧರ ಸಹಶಿಕ್ಷಕರ ನೇಮಕಾತಿ***

*01.* ಪ್ರಾಥಮಿಕ ಶಾಲಾ ಪದವೀದರ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ], ಕನ್ನಡ, ಉರ್ದು, ಮರಾಠಿ, ತಮಿಳು, ತೆಲುಗು ಭಾಷಾ ಮಾಧ್ಯಮಗಳ ಶಾಲೆಗಳಲ್ಲಿ.

*02.* ಹುದ್ದೆಗಳ ಸಂಖ್ಯೆ ಹಾಗೂ ವಿಷಯಗಳು ಸಂಬಂಧಿಸಿದ ಅಧಿಸೂಚನೆಯಲ್ಲಿ ನಮೂದಿಸಿರುವ ಮ್ಯಾಟ್ರಿಕ್ಸ್‌ಗೆ ಅನುಗುಣವಾಗಿರುತ್ತದೆ. ಮ್ಯಾಟ್ರಿಕ್ಸ್ ಪ್ರತಿಯನ್ನು ಮಾಹಿತಿ ಪುಸ್ತಕದೊಂದಿಗೆ ಲಗತ್ತಿಸಿದೆ.

***ವೇತನ ಶ್ರೇಣಿ–[14550–26700]:–***

***ವೇತನಶ್ರೇಣಿ–[14550–***350–15600–400–17200–450–19000–500–21000–600–24600–700***–26700]:***

***02] ಆಯ್ಕೆಗೆ ಅರ್ಹತೆ:***

ಆಯ್ಕೆಗೆ ಅರ್ಹತೆ ಪಡೆಯಲು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳು ಆಯಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿ ಪಡಿಸಿರುವ ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು ಹೊಂದಿರಬೇಕು. ಶಿಕ್ಷಕರ ಅರ್ಹತಾ ಪರೀಕ್ಷೆಯಲ್ಲಿನ (ಟಿ.ಇ.ಟಿ) ಪೇಪರ್–2ನಲ್ಲಿ ಅರ್ಹತೆಗಳಿಸಿದ ಅಭ್ಯರ್ಥಿಗಳು ಮಾತ್ರ ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಲ್ಲದೆ, ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಅವರು ಎಸ್.ಎಸ್.ಎಲ್.ಸಿ ಅಥವಾ ಪಿ.ಯು.ಸಿ./ ಡಿಇಡಿ/ಬಿಇಡಿ ಯಲ್ಲಿ ಆ ನೇಮಕಾತಿ ವಿಷಯದ ಭಾಷಾ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರಬೇಕು ಅಥವಾ ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು.

***I ಪ್ರಾಥಮಿಕ ಶಾಲಾ 6–8ನೇ ತರಗತಿ ಪದವೀಧರ ಸಹಶಿಕ್ಷಕ/ಶಿಕ್ಷಕಿ [ಸಾಮಾನ್ಯ] ಹುದ್ದೆಗಳಿಗೆ:***

**ಅ.** ಹಿರಿಯ ಪ್ರಾಥಮಿಕ ಶಾಲೆಯಲ್ಲಿನ ಪದವೀದರ ಶಿಕ್ಷಕರ ನೇಮಕಾತಿಗಾಗಿ ಅಭ್ಯರ್ಥಿಯು ಬಿಎ ಪದವಿಯನ್ನು ಮತ್ತು ಎರಡು ವರ್ಷದ ಡಿ.ಇಡಿ ಪರೀಕ್ಷೆಯನ್ನು ತೇರ್ಗಡೆ ಹೊಂದಿರಬೇಕು.

ಅಥವಾ

ಬಿಎ ಪದವಿಯಲ್ಲಿ ಶೇಕಡ 50% ಅಂಕಗಳನ್ನು ಮತ್ತು ಒಂದು ವರ್ಷದ ಬಿ.ಇಡಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು.

ಅಥವಾ

ಪಿ.ಯು.ಸಿ ಯಲ್ಲಿ ಶೇಕಡ 50% ಅಂಕಗಳೊಂದಿಗೆ 04 ವರ್ಷದ ಬ್ಯಾಚುಲರ್ ಆಫ್ ಎಲಿಮೆಂಟರಿ ಎಜುಕೇಷನ್ (ಬಿ.ಎಲ್.ಇಡಿ)ನಲ್ಲಿ ಉತ್ತೀರ್ಣರಾಗಿರಬೇಕು

ಅಥವಾ

ಪಿ.ಯು.ಸಿ ಯಲ್ಲಿ ಶೇಕಡ 50% ಅಂಕಗಳು ಹಾಗೂ 04 ವರ್ಷದ ಬ್ಯಾಚುಲರ್ ಆಫ್ ಎಜುಕೇಷನ್( ಬಿಎ.ಇಡಿ) ನಲ್ಲಿ ಉತ್ತೀರ್ಣರಾಗಿರಬೇಕು

ಅಥವಾ

ಬಿ.ಎ ಪದವಿಯಲ್ಲಿ ಮತ್ತು ಒಂದು ವರ್ಷದ ಬಿಇಡಿ (ಸ್ಪೆಷಲ್ ಎಜುಕೇಷನ್) ನಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ ಶೇಕಡ 45% ಅಂಕಗಳನ್ನು **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳನ್ನು ಪದವಿಯಲ್ಲಿ ಹೊಂದಿರತಕ್ಕದ್ದು

ಮತ್ತು

ಸರ್ಕಾರ ಗೊತ್ತುಪಡಿಸಿದ ಸಕ್ಷಮ ಪ್ರಾಧಿಕಾರಿಯು ನಡೆಸಿರುವ ಶಿಕ್ಷಕರ ಅರ್ಹತಾ ಪರೀಕ್ಷೆ (ಪೇಪರ್–2) ನ್ನು ತೇರ್ಗಡೆಹೊಂದಿರತಕ್ಕದ್ದು

ಮತ್ತು

**ಆ.** ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 6–8ನೇ ತರಗತಿ ಬೋಧಿಸಲು ಅರ್ಜಿಸಲ್ಲಿಸುವ ಅಭ್ಯರ್ಥಿಯು ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಸಾಮಾನ್ಯ (ಕನ್ನಡ, ಉರ್ದು, ತಮಿಳ್, ತೆಲುಗು, ಬಂಗಾಲಿ ಅಥವಾ ಮರಾಠಿ) ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ /

ಪಿ.ಯು.ಸಿ /ಪದವಿ/ ಡಿಇಡಿ/ ಬಿಇಡಿ ತತ್ಸಮಾನ ಪರೀಕ್ಷೆಯಲ್ಲಿ ಅಭ್ಯಾಸ ಮಾಡಿರಬೇಕು. ಅಥವಾ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿಯಲ್ಲಿ ಅಬ್ಯಾಸ ಮಾಡಿರಬೇಕು.

ಅಥವಾ

***ಕನ್ನಡ ಮಾಧ್ಯಮದ ಶಾಲೆಗಳ ಹುದ್ದೆಗಳಿಗೆ :*** ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಕಾವ / ಜಾಣ / ರತ್ನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದರೆ ಅರ್ಹರಾಗುತ್ತಾರೆ.

***II ಪ್ರಾಥಮಿಕ ಶಾಲಾ 6-8ನೇ ತರಗತಿ ಪದವೀಧರ ಸಹಶಿಕ್ಷಕ/ಶಿಕ್ಷಕಿ [ಆಂಗ್ಲ ಭಾಷೆ] ಹುದ್ದೆಗಳಿಗೆ:***

***01.*** 03 ವರ್ಷದ ಕಲಾ/ ವಿಜ್ಞಾನ ಪದವಿಯಲ್ಲಿ ಶೇಕಡಾ 50% ಅಂಕಗಳನ್ನು ಮತ್ತು ಆಂಗ್ಲಭಾಷೆಯನ್ನು ಒಂದು ಐಚ್ಚಿಕ ವಿಷಯವಾಗಿ ಮೂರು ವರ್ಷದ ಪದವಿಯಲ್ಲಿ ಅಭ್ಯಾಸಮಾಡಿರಬೇಕು

.

***ಅಥವಾ***

ಬಿಎ.ಇಡಿ/ ಬಿಎಸ್ಸಿ ಇಡಿ ಪದವಿಯಲ್ಲಿ ಕನಿಷ್ಟ ಶೇಕಡಾ 50% ಅಂಕಗಳನ್ನು ಮತ್ತು ಆಂಗ್ಲಭಾಷೆಯನ್ನು ಒಂದು ಐಚ್ಚಿಕ ವಿಷಯವಾಗಿ ಅಭ್ಯಾಸಮಾಡಿರಬೇಕು

***ಅಥವಾ***

ಪಿಯುಸಿ. ವಿಜ್ಞಾನ (ಪಿ.ಸಿ.ಎಂಬಿ)ಯಲ್ಲಿ ಶೇಕಡಾ 50% ಅಂಕಗಳನ್ನು ಮತ್ತು 04 ವರ್ಷದ ಬ್ಯಾಚುಲರ್ ಇನ್ ಎಲಿಮೆಂಟರಿ ಎಜುಕೇಷನ್( ಬಿ.ಎಲ್.ಇಡಿ) ನಲ್ಲಿ ಉತ್ತೀರ್ಣರಾಗಿರಬೇಕು ಹಾಗೂ ಆಂಗ್ಲಭಾಷೆಯನ್ನು ಐಚ್ಚಿಕ ವಿಷಯವಾಗಿ 03 ವರ್ಷದ ಪದವಿಯಲ್ಲಿ ಅಭ್ಯಾಸಮಾಡಿರಬೇಕು

ಮತ್ತು

ಅ) ಬಿಇಡಿ/ ಡಿಇಡಿ ಯಲ್ಲಿ ಆಂಗ್ಲಭಾಷೆಯನ್ನು ಬೋಧನಾ ವಿಷಯವಾಗಿ ಅಭ್ಯಾಸಮಾಡಿರಬೇಕು ( Method of teaching)

***ಅಥವಾ***

ಒಂದು ವರ್ಷದ ಬ್ಯಾಚುಲರ್ ಆಫ್ ಎಜುಕೇಷನ್ ಬಿಇಡಿ ಪದವಿ ( ಸ್ಪೆಷಲ್ ಎಜುಕೇಷನ್) ನಲ್ಲಿ ಆಂಗ್ಲಭಾಷೆಯನ್ನು ಬೋಧನಾ ವಿಷಯವಾಗಿ ಅಭ್ಯಾಸಮಾಡಿರಬೇಕು ( Method of teaching)

***ಅಥವಾ***

ಆಂಗ್ಲಭಾಷೆಯನ್ನು ಐಚ್ಚಿಕ ವಿಷಯವಾಗಿ ಬಿಎ(ಕಲಾ) ಮತ್ತು ಬಿ.ಎಸ್ಸಿ (ವಿಜ್ಞಾನ) ಪದವಿಯಲ್ಲಿ ಅಬ್ಯಾಸಮಾಡಿರಬೇಕು ಮತ್ತು ಬಿಇಡಿ ಪದವಿಯಲ್ಲಿ/ ಎರಡು ವರ್ಷದ ಡಿಇಡಿಯಲ್ಲಿ ಪ.ಜಾತಿ/ಪ.ಪಂಗಡ, ಪ್ರವರ್ಗ1 ಹಾಗೂ ಅಂಗವಿಕಲ ಅಭ್ಯರ್ಥಿಯು ಕನಿಷ್ಟ ಶೇಕಡ 45% ನ್ನು **ಮತ್ತು ಇತರೆ ಪ್ರವರ್ಗದ ಅಭ್ಯರ್ಥಿಯು** ಶೇಕಡ 50% ಅಂಕಗಳೊಂದಿಗೆ ಮೂರು ವರ್ಷದ ಪದವಿಯಲ್ಲಿ ಆಂಗ್ಲಭಾಷೆಯನ್ನು ಐಚ್ಚಿಕ ವಿಷಯವಾಗಿ ಅಬ್ಯಾಸಮಾಡಿರಬೇಕು

ಮತ್ತು

ಅ) ಸರ್ಕಾರ ಗೊತ್ತುಪಡಿಸಿದ ಸಕ್ಷಮ ಪ್ರಾಧಿಕಾರಿಯು ನಡೆಸಿರುವ ಶಿಕ್ಷಕರ ಅರ್ಹತಾ ಪರೀಕ್ಷೆ (ಪೇಪರ್-2) ನ್ನು ತೇರ್ಗಡೆಹೊಂದಿರತಕ್ಕದ್ದು

***ಆ) ಕಲಾ/ ವಿಜ್ಞಾನ ವಿಷಯದ ಪದವಿಯಲ್ಲಿ*** ಆಂಗ್ಲಭಾಷೆಯನ್ನು ಐಚ್ಚಿಕ ವಿಷಯವಾಗಿ ಅಭ್ಯಾಸಮಾಡದಿದ್ದಲ್ಲಿ

ಅ) ಯು.ಜಿಸಿ ಯಿಂದ ಮಾನ್ಯತೆ ಪಡೆದ ಅಂಗೀಕೃತ ವಿಶವಿದ್ಯಾಲಯದಿಂದ ಸ್ನಾತಕೋತ್ತರ ಪದವಿಯಲ್ಲಿ ಆಂಗ್ಲ ಭಾಷೆಯನ್ನು ಅಬ್ಯಾಸಮಾಡಿರಬೇಕು

ಅಥವಾ

ಆಂಗ್ಲ ಭಾಷಾ ಹುದ್ದೆಗೆ ಅಭ್ಯರ್ಥಿಗಳು ರೀಜನಲ್ ಇನ್‌ಸ್ಟಿಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾ ಇವರು ನಡೆಸುವ ಪೋಸ್ಟ್ ಗ್ರಾಜುಯೇಟ್ ಡಿಪ್ಲೊಮೋ ಇನ್ ಇಂಗ್ಲಿಷ್ ಪ್ರಮಾಣ ಪತ್ರವನ್ನು ಹೊಂದಿದ್ದಲ್ಲಿ ಪರಿಗಣಿಸಲಾಗುವುದು

ಮತ್ತು

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ 6–8ನೇ ತರಗತಿ ಬೋದಿಸಲು ಅರ್ಜಿಸಲ್ಲಿಸುವ ಅಭ್ಯರ್ಥಿಯು ಯಾವ ಬೋಧನಾ ಮಾಧ್ಯಮದ ಹುದ್ದೆಗೆ ಆಯ್ಕೆ ಬಯಸುತ್ತಾರೋ ಆ ಭಾಷಾ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿ/ ಡಿಇಡಿ/ ಬಿಇಡಿ ತತ್ಸಮಾನ ಪರೀಕ್ಷೆಯಲ್ಲಿ ಅಭ್ಯಾಸ ಮಾಡಿರಬೇಕು. ಅಥವಾ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಎಸ್.ಎಸ್.ಎಲ್.ಸಿ / ಪಿ.ಯು.ಸಿ /ಪದವಿಯಲ್ಲಿ ಅಬ್ಯಾಸ ಮಾಡಿರಬೇಕು.

***C&R Rules ನಲ್ಲಿ "Note: Primary School Assistant Masters / Misters [Science], [English], [Hindi], in primary, Higher Primary and Model Higher Primary School shall form port of the General cadre and they shall teach other subjects also in addition to science / English / Hindi to make up the normal work load for the teacher"*** ಎಂದಿರುತ್ತದೆ.

ಆದ್ದರಿಂದ ಪ್ರಾಥಮಿಕ, ಹಿರಿಯ ಮಾದರಿ ಹಾಗೂ ಉನ್ನತೀಕರಿಸಿದ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ವಿಜ್ಞಾನ / ಆಂಗ್ಲ / ಹಿಂದಿ ಪ್ರಾಥಮಿಕ ಶಾಲಾ ಸಹಶಿಕ್ಷಕರು ಸಾಮಾನ್ಯ ಶಿಕ್ಷಕರ ಹುದ್ದೆಯ ಭಾಗವಾಗಿರುತ್ತಾರೆ. ಈ ಶಿಕ್ಷಕರು ಕಾರ್ಯಭಾರ ಹೊಂದಾಣಿಕೆಗೆ ವಿಜ್ಞಾನ / ಆಂಗ್ಲ / ಹಿಂದಿ ವಿಷಯಗಳೊಂದಿಗೆ ಇತರೆ ವಿಷಯಗಳನ್ನು ಸಹಾ ಸಂಬಂಧಿಸಿದ ಶಾಲಾ ಮಾಧ್ಯಮಗಳಲ್ಲಿ ಬೋಧಿಸತಕ್ಕದ್ದು.

***ಸೂಚನೆ:*** ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗುವುದಿಲ್ಲ. ನಿಗದಿ ಪಡಿಸಿದ ಕೊನೆಯ ದಿನಾಂಕದಂದು ವಿದ್ಯಾರ್ಹತೆಯ ಅಂಕಪಟ್ಟಿ ಹಾಗೂ ಇತರೆ ಸರ್ಟಿಫಿಕೇಟ್‌ಗಳನ್ನು ಪಡೆದಿರಬೇಕು.

### *09] ವಯೋಮಿತಿ:*

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

***[ಅ]*** ಕನಿಷ್ಠ 18ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

***[ಆ]*** ಗರಿಷ್ಠ ವಯೋಮಿತಿ:

| | |
|---|---|
| ಸಾಮಾನ್ಯ ವರ್ಗ | 40 ವರ್ಷ |
| 2ಎ, 2ಬಿ, 3ಎ, 3ಬಿ | 43 ವರ್ಷ |
| ಪ.ಜಾ/ಪ.ಪಂ/ಪ್ರವರ್ಗ–1 | 45 ವರ್ಷ |

***ಸೂಚನೆ:*** ಗೌರವ ಶಿಕ್ಷಕರಿಗೆ ಗರಿಷ್ಠ ವಯೋಮಿತಿ ಅನ್ವಯಿಸುವುದಿಲ್ಲ.

### *ಟಿಪ್ಪಣಿ: ಗೌರವ ಶಿಕ್ಷಕರೆಂದರೆ:*

ಜಿಲ್ಲಾ ಪಂಚಾಯತ್ / ಮಂಡಲ ಪಂಚಾಯತ್ ವತಿಯಿಂದ ನೇಮಕಾತಿ ಹೊಂದಿ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯ ನಿರ್ವಹಿಸಿರಬೇಕು / ನಿರ್ವಹಿಸುತ್ತಿರಬೇಕು. ಹಾಗೂ ಗೌರವಧನವನ್ನು ಜಿಲ್ಲಾ ಪಂಚಾಯತ್ / ಮಂಡಲ ಪಂಚಾಯತ್ ವತಿಯಿಂದ ಪಡೆದಿರಬೇಕು / ಪಡೆಯುತ್ತಿರಬೇಕು. ಖಾಸಗಿ ಶಾಲೆಗಳಲ್ಲಿ ಮತ್ತು ಇತರ ಇಲಾಖೆಗಳಲ್ಲಿ ಗೌರವ ಶಿಕ್ಷಕರಾಗಿ ಕಾರ್ಯ ನಿರ್ವಹಿಸಿರುವವರು ಕೃಪಾಂಕ ಪಡೆಯಲು ಅರ್ಹರಿರುವುದಿಲ್ಲ.

### *10] ಅರ್ಹತೆ [ಮೆರಿಟ್] ನಿರ್ಧರಿಸುವ ವಿಧಾನ:*

### *ಎ] 1–5ನೇ ತರಗತಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ*

- ಟಿಇಟಿ ಪರೀಕ್ಷೆಯ ಪೇಪರ್–1 ನ್ನು ಕಡ್ಡಾಯವಾಗಿ ತೇರ್ಗಡೆಯಾಗಿರಬೇಕು
- ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ದ್ವಿತೀಯ ಪಿ.ಯು.ಸಿ.ಯಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಪ್ರಥಮ ಮತ್ತು ದ್ವಿತೀಯ ಟಿ.ಸಿ.ಹೆಚ್ / ಡಿ.ಇಡಿ.,ಗಳ ಬಾಹ್ಯ ಅಂಕಗಳು ಪಿ.ಯು.ಸಿ ಎಜುಕೇಷನ್ ಪರೀಕ್ಷೆಗಳಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.

- ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾ ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಎಸ್.ಎಸ್.ಎಲ್.ಸಿ / ದ್ವಿತೀಯ ಪಿ.ಯು.ಸಿ ಶೇಕಡಾ ಅಂಕಗಳ ಶೇಕಡಾ 35% + ಎರಡು ವರ್ಷಗಳ ಟಿ.ಸಿ.ಹೆಚ್ / ಡಿ.ಇಡಿ., ಬಾಹ್ಯ ಅಂಕಗಳ ಶೇಕಡಾ ಅಂಕ / ಪಿ.ಯು.ಸಿ ಎಜುಕೇಷನ್‌ನ ದ್ವಿತೀಯ ಪರೀಕ್ಷೆಯ ಶೇಕಡಾ ಅಂಕಗಳ 15 % + ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡಾ ಅಂಕಗಳ 35% ಹಾಗೂ ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಶೇಕಡ ಅಂಕಗಳ 15% ವೇಟೇಜ್ (weightage)ಇವುಗಳ ಸರಾಸರಿ ಆಧರಿಸಿ ಮೆರಿಟನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಸೇವೆ ಸಲ್ಲಿಸಿದ್ದಲ್ಲಿ / ಸಲ್ಲಿಸುತ್ತಿದ್ದಲ್ಲಿ ಇವರಿಗೆ ಪೂರ್ಣಗೊಂಡ ಪ್ರತಿ ವರ್ಷದ ಸೇವಾ ಅವಧಿಗೆ 3 ಕೃಪಾಂಕಗಳಂತೆ ಗರಿಷ್ಠ 15 ಕೃಪಾಂಕಗಳ ಮಿತಿಗೆ ಒಳಪಟ್ಟ ಕೃಪಾಂಕಗಳನ್ನು ನೀಡಲಾಗುವುದು.
- ಗೌರವ ಶಿಕ್ಷಕರು / ಅರೆಕಾಲಿಕ ಶಿಕ್ಷಕರಾಗಿದ್ದಲ್ಲಿ ಸಂಬಂಧಿಸಿದ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಸಲ್ಲಿಸಬೇಕು.
- ಸರಾಸರಿ ಶೇಕಡಾವಾರು ಅಂಕಕ್ಕೆ ಅಭ್ಯರ್ಥಿಯ ಕೃಪಾಂಕಗಳನ್ನು ಸೇರಿಸಲಾಗುವುದು. [ಕೃಪಾಂಕಕ್ಕೆ ಅಭ್ಯರ್ಥಿಯು ಅರ್ಹರಿದ್ದಲ್ಲಿ ಮಾತ್ರ] ಈ ಒಟ್ಟು ಅಂಕಗಳನ್ನು ಅರ್ಹತಾ ಅಂಕವೆಂದು ಪರಿಗಣಿಸಲಾಗುತ್ತದೆ.

***ಬಿ] 6-8 ನೇ ತರಗತಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗಾಗಿ***

- ಟಿಇಟಿ ಪರೀಕ್ಷೆಯ ಪೇಪರ್-2ನ್ನು ಕಡ್ಡಾಯವಾಗಿ ತೇರ್ಗಡೆಯಾಗಿರಬೇಕು
- ಪದವೀಧರ ಸಹಶಿಕ್ಷಕರ (ಸಾಮಾನ್ಯ) ಹುದ್ದೆಗೆ ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಅಭ್ಯರ್ಥಿಯು ಪದವಿಯಲ್ಲಿ ಎಲ್ಲಾ ವರ್ಷಗಳಲ್ಲಿ/ಸೆಮಿಸ್ಟರ್‌ಗಳಲ್ಲಿ ಗಳಿಸಿದ ಅಂಕಗಳ ಶೇಕಡವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಡಿಇಡಿ/ಬಿಇಡಿ , ಡಿಇಡಿ/ಬಿಇಡಿ ಸ್ಪೆಷಲ್ ಎಜುಕೇಷನ್ ಪರೀಕ್ಷೆಗಳಲ್ಲಿ ಗಳಿಸಿದ ಒಟ್ಟು ಬಾಹ್ಯ ಅಂಕಗಳ ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾ ಅಂಕಗಳನ್ನು ಲೆಕ್ಕ ಹಾಕಲಾಗುವುದು.
- ಬಿಎ/ಬಿಎಸ್ಸಿ ತತ್ಸಮಾನ ಪದವಿ ಯಲ್ಲಿನ ಶೇಕಡಾ ಅಂಕಗಳ ಶೇಕಡಾ 35% + ಎರಡು ವರ್ಷಗಳ ಡಿಇಡಿ/ ಬಿಇಡಿ./ ಸ್ಪೆಷಲ್ ಡಿಇಡಿ/ಬಿಇಡಿ ಬಾಹ್ಯ ಅಂಕಗಳ ಶೇಕಡಾ ಅಂಕ ಪರೀಕ್ಷೆಯ ಶೇಕಡಾ ಅಂಕಗಳ 15 % + ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡಾ ಅಂಕಗಳ 35% ಹಾಗೂ ಟಿ.ಇಟಿ ಪರೀಕ್ಷೆಯಲ್ಲಿ ಗಳಿಸಿದ ಶೇಕಡ ಅಂಕಗಳ 15% ವೇಟೇಜ್ (weightage)ಇವುಗಳ ಸರಾಸರಿ ಆಧರಿಸಿ ಮೆರಿಟನ್ನು ಲೆಕ್ಕ ಹಾಕಲಾಗುವುದು.
- ***ಸೂಚನೆ:*** ಸರ್ಕಾರದ ಅನುಮೋದನೆಯಂತೆ ಆಯುಕ್ತರ ಅಧಿಕೃತ ಜ್ಞಾಪನ ಸಂಖ್ಯೆ:ಸಿ3[1]ಪ್ರಾಶಿ:ನೇ:20[ಎ]:ಭಾಗ-3: 2005-06, ದಿನಾಂಕ:03.11.2006ರ ಪ್ರಕಾರ ಟಿ.ಸಿ.ಹೆಚ್., ಮತ್ತು ಡಿ.ಇಡಿ., ಪರೀಕ್ಷೆಗಳ ಅಂತರಿಕ ಮೌಲ್ಯಮಾಪನ ಅಂಕಗಳನ್ನು ಹೊರತುಪಡಿಸಿ ಕೇವಲ ಬಾಹ್ಯ ಅಂಕಗಳನ್ನು ಮಾತ್ರ ಆಯ್ಕೆಗೆ ಪರಿಗಣಿಸಲಾಗುವುದು.

- ಅಭ್ಯರ್ಥಿಯು ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಸೇವೆ ಸಲ್ಲಿಸಿದ್ದಲ್ಲಿ / ಸಲ್ಲಿಸುತ್ತಿದ್ದಲ್ಲಿ ಇವರಿಗೆ ಪೂರ್ಣಗೊಂಡ ಪ್ರತಿ ವರ್ಷದ ಸೇವಾ ಅವಧಿಗೆ 3 ಕೃಪಾಂಕಗಳಂತೆ ಗರಿಷ್ಠ 15 ಕೃಪಾಂಕಗಳ ಮಿತಿಗೆ ಒಳಪಟ್ಟ ಕೃಪಾಂಕಗಳನ್ನು ನೀಡಲಾಗುವುದು.
- ಗೌರವ ಶಿಕ್ಷಕರು / ಅರೆಕಾಲಿಕ ಶಿಕ್ಷಕರಾಗಿದ್ದಲ್ಲಿ ಸಂಬಂಧಿಸಿದ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಸಲ್ಲಿಸಬೇಕು.
- ಸರಾಸರಿ ಶೇಕಡಾವಾರು ಅಂಕಕ್ಕೆ ಅಭ್ಯರ್ಥಿಯ ಕೃಪಾಂಕಗಳನ್ನು ಸೇರಿಸಲಾಗುವುದು. [ಕೃಪಾಂಕಕ್ಕೆ ಅಭ್ಯರ್ಥಿಯು ಅರ್ಹರಿದ್ದಲ್ಲಿ ಮಾತ್ರ] ಈ ಒಟ್ಟು ಅಂಕಗಳನ್ನು ಅರ್ಹತಾ ಅಂಕವೆಂದು ಪರಿಗಣಿಸಲಾಗುತ್ತದೆ.

****** ಅರ್ಜಿ ಭರ್ತಿಮಾಡಲು ಕೊಟ್ಟಿರುವ ಸೂಚನೆಗಳನ್ನು ಗಮನಿಸುವುದು.***

## *11] ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು: [ಅ]*

| | | | |
|---|---|---|---|
| *01.* | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | : | ನಮೂನೆ–ಡಿ [ನಿಯಮ–3.ಎ(2)(3)], ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:132:ಎಸ್‌ಎಡಿ:1997, ದಿನಾಂಕ:08.02.2000 |
| *02.* | ಹಿಂದುಳಿದ ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳು. | : | ನಮೂನೆ–ಇ [ನಿಯಮ–3.ಎ(2)(3)], ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:132:ಎಸ್‌ಎಡಿ:1997, ದಿನಾಂಕ:08.02.2000 |
| *03.* | ಹಿಂದುಳಿದ ಪ್ರವರ್ಗ–2.ಎ, 2.ಬಿ, 3.ಎ ಮತ್ತು 3.ಬಿ ಈ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು. | : | ನಮೂನೆ–ಎಫ್ [ನಿಯಮ–3.ಎ(2)(3)] ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ:126:ಎಸ್‌ಎಡಿ:1997, ದಿನಾಂಕ:13.02.2003 |

ಅಭ್ಯರ್ಥಿಗಳು ಮೇಲೆ ನಿಗದಿಪಡಿಸಿರುವ ನಿಗದಿತ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರವಿರಬೇಕು ಮತ್ತು ಅವಧಿ ಮೀರಿದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

***[ಆ]*** ಮೇಲೆ ವಿವರಿಸಿರುವ ಪ್ರಕಾರ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ "ಸಮತಳ ಮೀಸಲಾತಿ" [Horizontal reservation] ಅನ್ವಯ ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | | |
|---|---|---|---|
| *01.* | ಮಾಜಿ ಸೈನಿಕರಿಗೆ | ಶೇಕಡಾ–10 | ಕರ್ನಾಟಕ ಸಿವಿಲ್ ಸರ್ವೀಸಸ್ [ಜನರಲ್ ರೆಕ್ರೂಟ್‌ಮೆಂಟ್] ರೂಲ್ಸ್ 1977ರ ನಿಯಮ–9[1]ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *02.* | ಅಂಗವಿಕಲರಿಗೆ | ಶೇಕಡಾ–5 | ಕರ್ನಾಟಕ ಸಿವಿಲ್ ಸರ್ವೀಸಸ್ [ಜನರಲ್ ರೆಕ್ರೂಟ್‌ಮೆಂಟ್] ರೂಲ್ಸ್ 1977ರ ನಿಯಮ–9[1][ಎ]ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *03.* | ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದವರ ಅಭ್ಯರ್ಥಿಗಳಿಗಾಗಿ | ಶೇಕಡಾ–5 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:23:ಎಸ್‌ಆರ್‌ಆರ್:1999 ದಿನಾಂಕ:23.11.2000 ಮತ್ತು ಸಂಖ್ಯದ:ಸಿಆಸುಇ:97:ಸೇನಿನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *04.* | ಗ್ರಾಮೀಣ ಅಭ್ಯರ್ಥಿಗಳಿಗೆ | ಶೇಕಡಾ–25 | 2000ದ ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ [ರಾಜ್ಯ ಸಿವಿಲ್ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿ ವಿದೇಯಕ] ಹಾಗೂ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97:ಸೇನಿನಿ:2002 ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *05.* | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇಕಡಾ–5 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:71:ಎಸ್‌ಆರ್‌ಆರ್:2001 ದಿ:24.10.2002 ಮತ್ತು ಸಂಖ್ಯೆ:ಸಿಆಸುಇ:97:ಸೇನೆನಿ:2002, ದಿ:22.11.2002 ಮತ್ತು ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿ:04.01.2008. |
| *06.* | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡಾ–50 | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್:41:ಎಸ್‌ಆರ್‌ಇ: 2001, ದಿನಾಂಕ:09.08.2001ರ ಪ್ರಕಾರ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರಲಾಗಿದ್ದು, ಮಹಿಳೆಯರಿಗೆ ಪ್ರತಿ ಗುಂಪಿನಲ್ಲೂ ಶೇಕಡಾ 50% ಹುದ್ದೆಗಳನ್ನು ಮೀಸಲಿಸಲಾಗಿದೆ. ಮತ್ತು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:53:ಸೇನೆನಿ:2007, ದಿನಾಂಕ:01.04.2008. |

